KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಫೆಬ್ರವರಿ ೧೫, ೨೦೧೦ (ಮಾಘ ೨೬, ಶಕ ವರ್ಷ ೧೯೩೧) | ನಂ. ೧೬೧ |
| --- | --- | --- |

**PARLIAMENTARY AFFAIRS AND LEGISLATION SECRETARIAT**

**NOTIFICATION**

**No. DPAL 6 Samvyavi 2010, Bangalore, Dated : 15th February 2010**

The following Order made by the Governor is hereby published for general information :-

**"ORDER – I**

In exercise of the powers conferred upon me by clause (1) of Article 174 of the constitution of India, I, H.R. Bhardwaj, Governor of Karnataka do hereby summon the Karnataka Legislative Assembly to meet at Bangalore at 12.00 noon. on Thursday the 25th day of February, 2010.

**H.R. BHARDWAJ**
Governor of Karnataka
By Order and in the name of the Governor of Karnataka,
**G.K. BOREGOWDA**
Secretary to Government,
Department of Parliamentary Affairs and Legislation

**NOTIFICATION**

The following Order made by the Governor is hereby published for general information :-

**"ORDER – II**

In exercise of the powers conferred upon me by clause (1) of Article 174 of the constitution of India, I, H.R. Bhardwaj, Governor of Karnataka do hereby summon the Karnataka Legislative Council to meet at Bangalore at 12.00 noon. on Thursday the 25th day of February, 2010.

**H.R. BHARDWAJ**
Governor of Karnataka
By Order and in the name of the Governor of Karnataka,
**G.K. BOREGOWDA**
Secretary to Government,
Department of Parliamentary Affairs and Legislation

ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಫೆಬ್ರವರಿ ೧೫, ೨೦೧೦ (ಮಾಘ ೨೬, ಶಕ ವರ್ಷ ೧೯೩೧) | ನಂ. ೧೬೨ |
| --- | --- | --- |

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂ. ಸಾರಿಇ : 28 : ಸಾಇಪ : 2010, ಬೆಂಗಳೂರು, ದಿನಾಂಕ : 11ನೇ ಫೆಬ್ರವರಿ, 2010**

ಕರ್ನಾಟಕ ಮೋಟಾರು ವಾಹನ ತೆರಿಗೆ ಅಧಿನಿಯಮ 1957 (ಕರ್ನಾಟಕ ಅಧಿನಿಯಮ 35:1957)ರ ಸೆಕ್ಷನ್ 16(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಾರ್ವಜನಿಕ ಹಿತಾಸಕ್ತಿಯಿಂದ ಈ ರೀತಿ ಆದೇಶಿಸುವ ಅವಶ್ಯವಿದೆಯೆಂದು

ಅಭಿಪ್ರಾಯ ತಳೆದು ಈ ಕೆಳಕಂಡ ಸಂಸ್ಥೆಗಳು ಹೊಂದಿರುವ ವಾಹನಗಳಿಗೆ ಮೋಟಾರು ವಾಹನ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿದೆ.

| ಕ್ರ ಸಂ. | ಸಂಸ್ಥೆ ಹೆಸರು | ವಾಹನ ಸಂಖ್ಯೆ | ಸಂಸ್ಥೆಯ/ವಾಹನಗಳ ಉದ್ದೇಶ | ನೀಡಲಾದ ತೆರಿಗೆ ವಿನಾಯಿತಿ |
|---|---|---|---|---|
| **1** | **2** | **3** | **4** | **5** |
| 1 | ಮಾತಾ ಅಮೃತಾನಂದಮಯಿ ಮಠ್, ಬೆಂಗಳೂರು | KL 7 AV 1260<br>KL 3 M 890<br>KL 7 BK 3015<br>KL 7 BK 3105<br>KL 7 BK 3114<br>KL 7 BA 5096<br>KL 7 BA 5099<br>KL 7 BA 5125<br>KL 7 AL 3780<br>KL 7 BG 2954<br>ಎಲ್ಲವೂ ಬಸ್ಸುಗಳು | ಈ ಸಂಸ್ಥೆಯು ಹಲವಾರು ಸೇವಾ ಕಾರ್ಯಗಳನ್ನು ನಡೆಸುತ್ತಿದೆ ಹಾಗೂ ಸಾರ್ವಜನಿಕ ಹಿತಾಸಕ್ತಿ ಕಾರ್ಯಗಳನ್ನು ನಡೆಸುತ್ತಿದ್ದು, ತಮ್ಮ ಕಾರ್ಯಕ್ರಮಗಳ ಮೇಲ್ವಿಚಾರಣೆ ಸಂಬಂಧ ಕರ್ನಾಟಕ ರಾಜ್ಯ ಪ್ರವಾಸ ಕೈಗೊಂಡಿರುತ್ತದೆ. | ದಿ : 12–2–2010 ರಿಂದ 22–2–2010 ರವರೆಗೆ 10 ಬಸ್ಸುಗಳಿಗೆ ಒಟ್ಟು 45,700/– ರೂ. ಗಳ ತೆರಿಗೆ ವಿನಾಯಿತಿ ನೀಡಲಾಗಿದೆ. |
| 2 | ಬಿ.ಡಬ್ಲ್ಯೂ ಸೂಪರ್ ಸ್ಪೆಷಾಲಿಟಿ ಐ ಹಾಸ್ಪಿಟಲ್, ಬೆಂಗಳೂರು. | Swaraz mazda 41+1 S.C. bus ಹೊಸ ವಾಹನಕ್ಕೆ | ಗ್ರಾಮೀಣ ಪ್ರದೇಶಗಳಿಂದ ರೋಗಿಗಳನ್ನು ಆಸ್ಪತ್ರೆಗೆ ಕರೆತರಲು ಮತ್ತು ಶಸ್ತ್ರ ಚಿಕಿತ್ಸೆಯ ನಂತರ ಉಚಿತವಾಗಿ ಬಿಟ್ಟು ಬರಲು ವಾಹನವನ್ನು ಉಪಯೋಗಿಸಲಾಗುತ್ತಿದೆ. | ಗರಿಷ್ಠ 25,000/– ರೂ. ಗಳನ್ನು ವಾರ್ಷಿಕ ತೆರಿಗೆ ವಿನಾಯಿತಿ ನೀಡಲಾಗಿದೆ. |
| 3. | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಮೆಡಿಕಲ್ ಟ್ರಸ್ಟ್ (ರಿ), ಧರ್ಮಸ್ಥಳ, ದಕ್ಷಿಣ ಕನ್ನಡ | KA 21 A 3773<br>TATA LP 1512<br>AMBULANCE | ಈ ಸಂಸ್ಥೆಯು ಬಡ ಜನರಿಗೆ ಉಚಿತ ವೈದ್ಯಕೀಯ ಚಿಕಿತ್ಸೆ ನೀಡಿ ಹಾಗೂ ಅಪಘಾತದಲ್ಲಿ ಕೈಕಾಲು ಕಳೆದು ಕೊಂಡವರಿಗೆ ಅಂಗವಿಕಲರಿಗೆ ಉಚಿತ ಕೃತಕ ಕೈಕಾಲು ಜೋಡಣೆ ಶಿಬಿರಗಳನ್ನು ನಡೆಸುತ್ತಿದೆ. ಸಂಸ್ಥೆ ಬಳಸುತ್ತಿರುವ ಈ ಆಂಬುಲೆನ್ಸ್ ಮೇಲಿನ ಚಟುವಟಿಕೆಗಳಿಗೆ ಉಪಯೋಗಿಸಲಾಗುತ್ತಿದೆ. | ಈ ವಾಹನಕ್ಕೆ ವಾರ್ಷಿಕ ತೆರಿಗೆ ಆಂಬುಲೆನ್ಸ್ ದರದಲ್ಲಿ ಇರುವ 1100/– ರೂ. ಗಳ ತೆರಿಗೆ ವಿನಾಯಿತಿ ನೀಡಲಾಗಿದೆ. |

ಸದರಿ ಸಂಸ್ಥೆಗಳ ನೊಂದಾಯಿತ ವಾಹನಗಳ ತೆರಿಗೆ ವಿನಾಯಿತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1) ವಾಹನದ ಮಾಲೀಕತ್ವ ಬದಲಾವಣೆಯಲ್ಲಿ ತೆರಿಗೆ ವಿನಾಯಿತಿಯು ರದ್ದುಗೊಳ್ಳುತ್ತದೆ.
2) ಯಾವ ಉದ್ದೇಶಕ್ಕಾಗಿ ತೆರಿಗೆ ವಿನಾಯಿತಿ ನೀಡಲಾಗಿದೆಯೋ ಆ ಉದ್ದೇಶ ಬದಲಾದಲ್ಲಿ ತೆರಿಗೆ ವಿನಾಯಿತಿಯು ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನರಸಿಂಹರಾಜು**
ಪೀಠಾಧಿಕಾರಿ, (ಪ್ರ), ಸಾರಿಗೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಫೆಬ್ರವರಿ ೧೫, ೨೦೧೦ (ಮಾಘ ೨೬, ಶಕ ವರ್ಷ ೧೯೩೧) | ನಂ. ೧೬೩ |
|---|---|---|

**URBAN DEVELOPMENT SECRETARIAT**

**NOTIFICATION**

**No. UDD 14 MLR 2010, Bangalore, Dated : 15th February 2010**

Government hereby allot the offices of the Mayor and Deputy Mayor to various categories for the THIRTEENTH TERM is respect of the following CORPORATIONS, under Rule 73-A of the Karnataka Municipal Corporations (Election) (Amendment) Rules 2007 and Guidelines order No. UDD 178 MLR 2007, Dated 23.01.2008.

| Sl. No. | Name of the City Corporation | Mayor | Deputy Mayors |
|---|---|---|---|
| 1 | 2 | 3 | 4 |
| 1 | Bangalore | BCA | G |
| 2 | Belgaum | G | BCA |
| 3 | Bellary | BCA(W) | SC |
| 4 | Davanagere | G | ST(W) |
| 5 | Gulbarga | SC(W) | G |
| 6 | Hubli-Dharwad | SC | BCB(W) |
| 7 | Mangalore | G(W) | BCA |
| 8 | Mysore | G | G(W) |

By Order and in the name of the Governor of Karnataka,
**C.R. RAVINDRA**
Under Secretary to Government,
Urban Development Department

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಫೆಬ್ರವರಿ ೧೬, ೨೦೧೦ (ಮಾಘ ೨೭, ಶಕ ವರ್ಷ ೧೯೩೧) | ನಂ. ೧೬೪ |
|---|---|---|

### ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಪಸಂಮೀ 94 ಪಸಸೇ 2009, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2010**

ಕರ್ನಾಟಕ ಸರ್ಕಾರ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 8ನೇ ಪ್ರಕರಣದ (1)ನೇ ಉಪ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದಲ್ಲಿ ವಿಧಿಸಿದಂತೆ 3ನೇ ಪ್ರಕರಣದ (2)ನೇ ಉಪ ಪ್ರಕರಣ (ಎ) ಖಂಡದಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರಡು ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು (ಪಶುವೈದ್ಯರ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು, 2009ನ್ನು ಮಾಡಲು ಉದ್ದೇಶಿಸಿದ್ದು, ಅದನ್ನು ಎಲ್ಲ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದ್ದು, ಅದರಿಂದ ಬಾಧಿತರಾಗುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆ ಆಹ್ವಾನಿಸಲಾಗಿದ್ದು, ಈ ಸೂಚನೆ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿನಗಳ ನಂತರ ಮೇಲ್ಕಂಡ ಕರಡನ್ನು ಪರಿಗಣಿಸಲಾಗುತ್ತದೆ.

ಯಾವುದೇ ಆಕ್ಷೇಪಣೆ ಅಥವಾ ಸೂಚನೆಗಳು ಯಾವುದೇ ವ್ಯಕ್ತಿಯಿಂದ ಮೇಲೆ ತಿಳಿಸಿದ ಅವಧಿಯೊಳಗೆ ಸ್ವೀಕೃತಗೊಂಡಲ್ಲಿ ರಾಜ್ಯ ಸರ್ಕಾರವು ಪರಿಗಣನೆಗೆ ತೆಗೆದುಕೊಳ್ಳುತ್ತದೆ. ಸಲಹೆ ಮತ್ತು ಸೂಚನೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಬೆಂಗಳೂರು – 560 001 ಇವರಿಗೆ ಕಳುಹಿಸಬಹುದು.

### ಕರಡು ನಿಯಮಗಳು

**1. ಶೀರ್ಷಿಕೆ, ಅನ್ವಯ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು (ಪಶುವೈದ್ಯರ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು, 2009 ಎಂದು ಕರೆಯಲಾಗುವುದು.

(2) ಅವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರುವುದು.

(3) ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ಅಥವಾ ಕರ್ನಾಟಕ ನಾಗರೀಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು, 2006 ಅಥವಾ ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು (ನೇಮಕಾತಿ) ನಿಯಮಗಳು, 1965, ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ 14) ಮೇರೆಗೆ ರಚಿಸಲಾದ ಅಥವಾ ರಚಿಸಲಾಗಿದೆ ಎಂದು ಭಾವಿಸಲಾದ ಯಾವುದೇ ಇತರ ನಿಯಮಗಳಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಪಶುವೈದ್ಯಾಧಿಕಾರಿಗಳ ನೇಮಕಾತಿ ಕುರಿತಂತೆ ಏನೇ ಇದ್ದರೂ, ಪಶುಪಾಲನಾ ಮತ್ತು ಪಶುವೈದ್ಯಕೀಯ ಆಯುಕ್ತಾಲಯದಲ್ಲಿ ಅನುಸೂಚಿಯಲ್ಲಿ ನಮೂದಿಸಿದ 487 ಪಶುವೈದ್ಯಾಧಿಕಾರಿಗಳ ಪ್ರವರ್ಗದ ನೇರ ನೇಮಕಾತಿ ರಿಕ್ತ ಸ್ಥಾನಗಳಿಗೆ ಈ ನಿಯಮಗಳ ನೇಮಕಾತಿ ವಿಧಾನ ಅನ್ವಯಿಸುತ್ತದೆ.

ಒದಗಿಸಿದ ಒಂದಕ್ಕಿಂತ ಹೆಚ್ಚಿನ ನೇಮಕಾತಿಗೆ ಈ ನಿಯಮಗಳು ಅನ್ವಯವಾಗದು.

**2. ಪರಿಭಾಷೆಗಳು:–** (1) ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು:–

(ಅ) 'ಸಮಿತಿ' ಎಂದರೆ ನಿಯಮ 3ರಡಿ ರಚಿಸಲಾದ ರಾಜ್ಯ ಮಟ್ಟದ ಆಯ್ಕೆ ಸಮಿತಿ.

(ಆ) 'ಅರ್ಹತಾ ಪರೀಕ್ಷೆ' ಎಂದರೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳ ನೇಮಕಾತಿಗೆ ಪದವಿ ಪಡೆಯಲು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆ.

(ಇ) 'ಅನುಸೂಚಿ' ಎಂದರೆ ಈ ನಿಯಮಗಳಿಗೆ ಸೇರಿಸಲಾದ ಅನುಸೂಚಿ.

(ಈ) 'ಖಾಲಿ ಸ್ಥಾನ' ಎಂದರೆ ಈ ನಿಯಮಗಳಡಿಯಲ್ಲಿ ಭರ್ತಿ ಮಾಡಲಾಗುವ ಖಾಲಿ ಹುದ್ದೆಗಳು.

(ಉ) ಈ ನಿಯಮಗಳಲ್ಲಿ ಬಳಸಲಾಗಿರುವ ಆದರೆ ಪರಿಭಾಷಿಸಿಲ್ಲದ ಇತರೆ ಪದಗಳು ಮತ್ತು ವ್ಯಾಖ್ಯಾನಗಳು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಅನುಕ್ರಮವಾಗಿ ಅವುಗಳಿಗೆ ನೀಡಲಾದ ಅರ್ಥಗಳನ್ನು ಹೊಂದಿರತಕ್ಕದ್ದು.

**3. ಆಯ್ಕೆ ಸಮಿತಿ:–** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿರುವುದಕ್ಕೆ ತದ್ವಿರುದ್ಧವಾಗಿ ಏನೇ ಇದ್ದರೂ ಅಥವಾ ಪಶುವೈದ್ಯಾಧಿಕಾರಿಗಳ ವೃಂದದ ನೇಮಕಾತಿಗೆ ವಿಶೇಷವಾಗಿ ಮಾಡಿದ ನಿಯಮದಂತೆ ರಾಜ್ಯಮಟ್ಟದ ನೇಮಕಾತಿ ಸಮಿತಿ (ಇನ್ನು ಮುಂದೆ ಸಮಿತಿ ಎಂದು ಉಲ್ಲೇಖಿಸುವ) ಕೆಳಗಿನಂತೆ ಸದಸ್ಯರುಗಳನ್ನು ಒಳಗೊಂಡಿರುತ್ತದೆ, ಅಂದರೆ:–

| | | |
|---|---|---|
| (1) | ಆಯುಕ್ತರು,<br>ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು. | ಅಧ್ಯಕ್ಷರು |
| (2) | ನಿರ್ದೇಶಕರು,<br>ಪಶುಪಾನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು. | ಸದಸ್ಯರು |
| (3) | ಆಯುಕ್ತರು,<br>ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಅಥವಾ ಅವರ ಪ್ರತಿನಿಧಿ. | ಸದಸ್ಯರು |
| (4) | ನಿರ್ದೇಶಕರು,<br>ಬುಡಕಟ್ಟು ಕಲ್ಯಾಣ ಇಲಾಖೆ, ಬೆಂಗಳೂರು ಅಥವಾ ಅವರ ಪ್ರತಿನಿಧಿ. | ಸದಸ್ಯರು |
| (5) | ನಿರ್ದೇಶಕರು,<br>ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ಅಥವಾ ಅವರ ಪ್ರತಿನಿಧಿ. | ಸದಸ್ಯರು |
| (6) | ನಿರ್ದೇಶಕರು,<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಅಥವಾ ಅವರ ಪ್ರತಿನಿಧಿ. | ಸದಸ್ಯರು |
| (7) | ನಿರ್ದೇಶಕರು,<br>ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬೆಂಗಳೂರು ಅಥವಾ ಅವರ ಪ್ರತಿನಿಧಿ. | ಸದಸ್ಯರು |
| (8) | ಜಂಟಿ ನಿರ್ದೇಶಕರು (ಆಡಳಿತ),<br>ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು. | ಸದಸ್ಯ – ಕಾರ್ಯದರ್ಶಿ |

**4. ನೇಮಕಾತಿ ವಿಧಾನ:–** (1) ಸಮಿತಿಯು ಈ ನಿಯಮದಡಿ ಭರ್ತಿ ಮಾಡಬೇಕಾದ ಖಾಲಿ ಹುದ್ದೆಗಳನ್ನು ಗಮನದಲ್ಲಿರಿಸಿಕೊಂಡು, ಅರ್ಹತಾ ಷರತ್ತು, ಆಯ್ಕೆವಿಧಾನ, ಭರ್ತಿ ಮಾಡಲಾಗುವ ಹುದ್ದೆಗಳ ಸಂಖ್ಯೆ ಮತ್ತು ಯಾವುದೇ ಕಾನೂನಿನಡಿ ಮತ್ತು ಯಾವುದೇ ಆದೇಶಗಳಡಿ ಒದಗಿಸಲಾದ ಮೀಸಲಾತಿಯಂತೆ ತತ್ಕಾಲಕ್ಕೆ ಜಾರಿಯಲ್ಲಿರುವ ವರ್ಗೀಕರಿಸಿದ ಹುದ್ದೆಗಳನ್ನಾಧರಿಸಿ ಅಧಿಕೃತ ರಾಜ್ಯಪತ್ರದಲ್ಲಿ ನಿರ್ದಿಷ್ಟಪಡಿಸಿ, ಉದ್ದೇಶಿತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಬೇಕು. ಆ ಜಾಹಿರಾತಿನ ಸಾರಾಂಶವನ್ನು ರಾಜ್ಯದಲ್ಲಿ ಹೆಚ್ಚು ಪ್ರಸಾರವಾಗುವ ಎರಡು ದಿನಪತ್ರಿಕೆಗಳಲ್ಲಿ ಪ್ರಕಟಿಸಬೇಕು, ಅದರಲ್ಲಿ ಒಂದು ಕನ್ನಡವಾಗಿರಲೇಬೇಕು.

(2) ಉಪ ನಿಯಮ (1)ರಂತೆ ಪ್ರಕಟಿಸಲಾದ ಜಾಹಿರಾತಿಗೆ ಅನುಗುಣವಾಗಿ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಲ್ಲಿನ ಯೋಗ್ಯತಾನುಸಾರ ನೇಮಕಾತಿಗೆ ಅರ್ಹತೆ ಪಡೆದ ಅಭ್ಯರ್ಥಿಗಳ ಪಟ್ಟಿಯನ್ನು, ಅರ್ಹತಾ ಪರೀಕ್ಷೆಯಲ್ಲಿ ಪಡೆದ ಶೇಕಡಾವಾರು ಒಟ್ಟು ಅಂಕಗಳು ಮತ್ತು ಉಪ ನಿಯಮ (4)ರಲ್ಲಿ ನಿರ್ದಿಷ್ಟಪಡಿಸಿದ ಕೃಪಾಂಕ (Weightage) ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಡಿ ಮತ್ತು ಆದೇಶಗಳಡಿ ಒದಗಿಸಿದ ಮೀಸಲಾತಿಯಂತೆ ನೇಮಕಾತಿಗೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ಸಮಿತಿ ಸಿದ್ಧಪಡಿಸಬೇಕು.

(3) ಉಪ ನಿಯಮ (2)ರಂತೆ ಆಯ್ಕೆ ಮಾಡಲಾಗುವ ಅಭ್ಯರ್ಥಿಗಳ ಸಂಖ್ಯೆಯು ಪ್ರಕಟಿಸಿದ ಖಾಲಿ ಹುದ್ದೆಗಳಿಗೆ ಅನುಗುಣವಾಗಿರಬೇಕು.

(4) ಎಂ.ವಿ.ಎಸ್ಸಿ. ಪದವಿ ಪಡೆದ ಅಭ್ಯರ್ಥಿಗಳಿಗೆ ಅರ್ಹತಾ ಪರೀಕ್ಷೆಯ ಶೇಕಡಾವಾರು ಅಂಕದೊಂದಿಗೆ ಶೇಕಡಾ. 5ರಷ್ಟು ಕೃಪಾಂಕ (Weightage) ಸೇರಿಸಲಾಗುವುದು.

(5) ಇಬ್ಬರು ಅಥವಾ ಹೆಚ್ಚಿನ ಅಭ್ಯರ್ಥಿಗಳು ಸಮಾನ ಅಂಕಗಳನ್ನು ಪಡೆದ ಪಕ್ಷದಲ್ಲಿ ಅಂತಹ ಅಭ್ಯರ್ಥಿಗಳ ಶ್ರೇಣಿಯನ್ನು ವಯಸ್ಸಿನಲ್ಲಿ ಹಿರಿಯರಾದವರನ್ನು, ಕಿರಿಯನಿಗಿಂತ ಮೇಲಿರಿಸಿ ನಿರ್ಧರಿಸಲಾಗುವುದು. ಅರ್ಹ ಅಭ್ಯರ್ಥಿಗಳ ಸಂಖ್ಯೆಯ ಪಟ್ಟಿ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳಿಗನುಗುಣವಾಗಿರುವುದು.

(6) ಉಪ ನಿಯಮ (2)ರಂತೆ ಒಳಗೊಳ್ಳದ ಅಭ್ಯರ್ಥಿಗಳ ಹೆಚ್ಚುವರಿ ಪಟ್ಟಿಯನ್ನು ಸಹ ಸಮಿತಿ ತಯಾರಿಸುವುದು. ಪ್ರತಿ ಮೀಸಲಾತಿ ವೃಂದದ ಸಂಖ್ಯೆಯು (ಸಮತಲ ಮತ್ತು ನೇರ) ಶೇಕಡಾ. 10 ರಷ್ಟು ಹೆಚ್ಚುವರಿ ಮೀಸಲಾತಿ ಪಟ್ಟಿಯಲ್ಲಿರಿಸಬೇಕು. ಹೆಚ್ಚುವರಿ ಪಟ್ಟಿಯಲ್ಲಿ ಉಪ ನಿಯಮ (2)ರಂತೆ ಪ್ರತಿ ಮೀಸಲಾತಿ ವೃಂದದಲ್ಲಿ (ಸಮತಲ ಮತ್ತು ನೇರ) ಕನಿಷ್ಠ ಪಕ್ಷ ಒಬ್ಬ ಅಭ್ಯರ್ಥಿಯಾದರೂ ಇರಬೇಕು. ಉಪ ನಿಯಮ (2)ರಂತೆ ಆಯ್ಕೆಪಟ್ಟಿಯಲ್ಲಿ ಸೇರಿಸಲಾದ ಅಭ್ಯರ್ಥಿ ನಿರ್ದಿಷ್ಟ ಅವಧಿಯೊಳಗೆ ಸೇವೆಗೆ ಸೇರದಿದ್ದಲ್ಲಿ, ಅದೇ ಮೀಸಲಾತಿ ವೃಂದಕ್ಕೆ ಸೇರಿದ ಹೆಚ್ಚುವರಿ ಪಟ್ಟಿಯಲ್ಲಿರುವ ಅಂತಹ ಅಭ್ಯರ್ಥಿಯನ್ನು ನೇಮಕಾತಿ ಮಾಡಲಾಗುವುದು.

(7) ಉಪನಿಯಮ (2) ಮತ್ತು (6)ರಂತೆ ಸಿದ್ಧಪಡಿಸಿದ ಪಟ್ಟಿಯನ್ನು ರಾಜ್ಯಪತ್ರದಲ್ಲಿ ಮತ್ತು ಸಮಿತಿಯ ಕಛೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸಲಾಗುವುದು.

(8) ಸಮಿತಿ ಆಯ್ಕೆ ಮಾಡಿದ ಅಭ್ಯರ್ಥಿಗಳ ಪಟ್ಟಿ ಮತ್ತು ನೇಮಕಾತಿ ಪ್ರಾಧಿಕಾರಕ್ಕೆ ನೀಡಿದ ಪಟ್ಟಿಯಲ್ಲಿನ ಪ್ರಕಟಿತ ಎಲ್ಲಾ ಹುದ್ದೆಗಳು ಭರ್ತಿಯಾಗುವವರೆಗೆ ಅಥವಾ ಪ್ರಕಟವಾದ ದಿನಾಂಕದಿಂದ ಒಂದು ವರ್ಷದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಿಂಧುವಾಗಿರುವುದು.

**5. ಅಭ್ಯರ್ಥಿಗಳ ನೇಮಕಾತಿ:–**(1) ನಿಯಮ 4 ರಡಿಯಲ್ಲಿ ತಯಾರಿಸಲಾದ ಆಯ್ಕೆಪಟ್ಟಿಯಲ್ಲಿ ಯಾವ ಅಭ್ಯರ್ಥಿಗಳ ಹೆಸರು ಸೇರ್ಪಡೆಯಾಗುತ್ತದೊ, ಅವರ ಹೆಸರು, ಖಾಲಿ ಹುದ್ದೆಗಳ ರಿಕ್ತ ಸ್ಥಾನದ ಯಾವ ಒಂದು ಕ್ರಮದಲ್ಲಿ ಬರುತ್ತದೊ, ಅದನ್ನು ನೋಡಿಕೊಂಡು, ಅಗತ್ಯ ವಿಚಾರಣೆಯ ನಂತರ ಪ್ರತೀ ಅಭ್ಯರ್ಥಿ ಎಲ್ಲಾ ವಿಧದಲ್ಲೂ ನೇಮಕಾತಿಗೆ ಅರ್ಹನಾಗಿದ್ದಾನೆ ಎಂಬುದನ್ನು ಮನದಟ್ಟು ಮಾಡಿಕೊಂಡನಂತರ ನೇಮಕಾತಿ ಪ್ರಾಧಿಕಾರ ಅವರನ್ನು ನೇಮಕಾತಿ ಮಾಡಬಹುದು.

(2) ಅಭ್ಯರ್ಥಿಯ ಹೆಸರು ನಿಯಮ 4ರ ಉಪ ನಿಯಮ (7)ರಂತೆ ಸೇರ್ಪಡೆಯಾಗಿ ಪ್ರಕಟಿಸಿದ ಮಾತ್ರಕ್ಕೆ ನೇಮಕಾತಿ ಪ್ರದಾನ ಮಾಡಲು ಹಕ್ಕುಳ್ಳವನಾಗಿರುವುದಿಲ್ಲ.

**6. ಸಾಮಾನ್ಯ ನೇಮಕಾತಿ ನಿಯಮಗಳ ಅನ್ವಯ:–** ಈ ನಿಯಮಗಳಲ್ಲಿ ಅವಕಾಶ ಮಾಡಲಾದ ವಿಷಯಗಳನ್ನು ಹೊರತುಪಡಿಸಿ, ಪ್ರಸ್ತುತ ಚಾಲ್ತಿಯಲ್ಲಿರುವ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಮಾಡಿರುವ ಅವಕಾಶಗಳು ಈ ನಿಯಮದಡಿಯಲ್ಲಿ ಮಾಡುವ ನೇಮಕಾತಿಗಳಿಗೆ ಅನ್ವಯವಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ.ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ).

**ಅನುಸೂಚಿ**

**(ನಿಯಮ 3ನ್ನು ನೋಡಿ)**

| ಹುದ್ದೆಯ ಪ್ರವರ್ಗ ಮತ್ತು ವೇತನಶ್ರೇಣಿ | ಭರ್ತಿ ಮಾಡಲಾಗುವ ಹುದ್ದೆಗಳ ಸಂಖ್ಯೆ | ಕನಿಷ್ಠ ವಿದ್ಯಾರ್ಹತೆ |
|---|---|---|
| ಪಶುವೈದ್ಯಾಧಿಕಾರಿ<br>(ರೂ.13,000-23,850) | 487 | ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿಸಲಾದ ಯಾವುದೇ ಪಶುವೈದ್ಯಕೀಯ ವಿಜ್ಞಾನ ವಿಶ್ವವಿದ್ಯಾಲಯ ಅಥವಾ ಕೃಷಿ ವಿಶ್ವವಿದ್ಯಾಲಯದಿಂದ ಬಿ.ವಿ.ಎಸ್ಸಿ. ಮತ್ತು ಎ.ಹೆಚ್. ಪದವಿ ಪಡೆದಿರಬೇಕು.<br>ಪಶುವೈದ್ಯಕೀಯ ಪರಿಷತ್ತು ಅಧಿನಿಯಮ, 1984 ಅಥವಾ ಕರ್ನಾಟಕ ಪಶುವೈದ್ಯಕೀಯ ವೃತ್ತಿ ನಡೆಸುವವರ ಅಧಿನಿಯಮ, 1983ರ ಪ್ರಕಾರ ತನ್ನ ಹೆಸರನ್ನು ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನಲ್ಲಿ ನೋಂದಾಯಿಸಿರಲೇಬೇಕು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ.ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ).

| ಭಾಗ – III | ಬೆಂಗಳೂರು, ಮಂಗಳವಾರ, ಫೆಬ್ರವರಿ ೧೬, ೨೦೧೦ (ಮಾಘ ೨೭, ಶಕ ವರ್ಷ ೧೯೩೧) | ನಂ. ೧೬೫ |
|---|---|---|

**ಕರ್ನಾಟಕ ವಿಧಾನಸಭೆಯ ಸಚಿವಾಲಯ**

**ಸಂಖ್ಯೆ : ವಿಸಸ/ಶಾರಶಾ/07/ಕರೆ/2009, ಬೆಂಗಳೂರು, ದಿನಾಂಕ : 16ನೇ ಫೆಬ್ರವರಿ, 2010**

ಮಾನ್ಯರೆ,

**ವಿಷಯ :–** ಕರ್ನಾಟಕ ವಿಧಾನಸಭೆಯ ಅಧಿವೇಶನದ ದಿನಾಂಕ ಮತ್ತು ಸಮಯದ ಬಗ್ಗೆ.

ಕರ್ನಾಟಕದ ಘನತೆವೆತ್ತ ರಾಜ್ಯಪಾಲರು ಭಾರತ ಸಂವಿಧಾನದ 174ನೇ ಅನುಚ್ಛೇದ (1)ನೇ ಖಂಡದ ಮೇರೆಗೆ ಲಭಿಸಿರುವ ಅಧಿಕಾರವನ್ನು ಉಪಯೋಗಿಸಿ ಕರ್ನಾಟಕ ವಿಧಾನಸಭೆಯು **ಗುರುವಾರ, ದಿನಾಂಕ 25ನೇ ಫೆಬ್ರವರಿ, 2010 ರಂದು ಅಪರಾಹ್ನ 12.00 ಗಂಟೆಗೆ ಬೆಂಗಳೂರಿನ ವಿಧಾನಸೌಧದಲ್ಲಿರುವ ವಿಧಾನಸಭೆಯ ಸಭಾಂಗಣದಲ್ಲಿ** ಸೇರಲು ಆದೇಶಿಸಿರುತ್ತಾರೆಂದು ತಮಗೆ ತಿಳಿಸಲಿಚ್ಛಿಸುತ್ತೇನೆ.

ಸದರಿ ಸಭೆಗೆ ಹಾಜರಾಗಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ,
**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY SECRETARIAT**

**No. KLAS/LGA/SUM/07/2009, Bangalore, Dated : 16th February, 2010**

Dear Sir/ Madam,

**Sub :-** Sessions of Karnataka Legislative Assembly date and time – intimation – reg.

In exercise of the powers conferred under Article 174(1) of the Constitution of India, His Excellency the Governor of Karnataka has summoned the Karnataka Legislative Assembly to meet at 12.00 noon on Thursday, the 25th February 2010 in the Legislative Assembly Chamber, Vidhana Soudha, Bangalore.

I request you kindly to attend the meeting.

Yours faithfully
**S.B. PATIL**
Secretary, Karnataka Legislative Assembly

ವಿಶೇಷ ಪತ್ರಿಕೆ

| ಭಾಗ – VI | ಬೆಂಗಳೂರು, ಬುಧವಾರ, ಫೆಬ್ರವರಿ ೧೭, ೨೦೧೦ (ಮಾಘ ೨೮, ಶಕ ವರ್ಷ ೧೯೩೧) | ನಂ. ೧೬೯ |
|---|---|---|

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಅಧಿಸೂಚನೆ**

**ನಂ. ಚುನಾವಣೆ ಸಿಆರ್.95–1/2009–10, ದಿನಾಂಕ : 16ನೇ ಫೆಬ್ರವರಿ, 2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ 5ನೇ ಪ್ರಕರಣದ ಉಪ ಪ್ರಕರಣ (5)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸುತ್ತಾ ಆಮ್ಲಾನ್ ಆದಿತ್ಯ ಬಿಸ್ವಾಸ್ ಚಿತ್ರದುರ್ಗ ಜಿಲ್ಲಾಧಿಕಾರಿ ಆದ ನಾನು ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ, ಈ ಕೆಳಕಂಡ ಗ್ರಾಮ ಪಂಚಾಯ್ತಿಗೆ ಸಂಭಂಧಿಸಿದಂತೆ ಜನವರಿ 2010ರ 18ನೇ ದಿನಾಂಕದಂದು ಅಧಿಸೂಚಿಸಿದ ಚುನಾವಣೆ ಸಿ.ಆರ್. 95–1/2009.10ರ ಸಂಖ್ಯೆಯ ಅಧಿಸೂಚನೆಯನ್ನು ಈ ಮುಂದಿನಂತೆ ತಿದ್ದುಪಡಿ ಮಾಡಿರುತ್ತೇನೆ.

**ಕೋಷ್ಟಕ – II**

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಸ್ಥಾನಗಳನ್ನು ಮೀಸಲಿರಿಸಲಾದ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | | | ಮೀಸಲಿರಿಸಿದ ಸ್ಥಾನಗಳಿಂದ ಮಹಿಳೆಯರಿಗಾಗಿ ಮೀಸಲಿರಿಸಿದ ಪ್ರಾದೇಶಿಕ ಚುನಾವಣಾ ಕ್ಷೇತ್ರದ | | |
|---|---|---|---|---|---|---|
| | ಕ್ರ.ಸಂ | ಹೆಸರು | ಸ್ಥಾನ | ಕ್ರ.ಸಂ | ಹೆಸರು | ಸ್ಥಾನ |
| ಅನುಸೂಚಿತ ಜಾತಿ | | | | | | |
| 11.ರಾಯಾಪುರ | 1 | ರಾಯಾಪುರ–2 | 1 | 1 | ರಾಯಾಪುರ–2 | 1 |

| | | | | | | |
|---|---|---|---|---|---|---|
| ಹಿಂದುಳಿದ "ಅ" ವರ್ಗ | | | | | | |
| 13.ತುಮಕೂರ್ಲಹಳ್ಳಿ | 1 | ತುಮಕೂರ್ಲಹಳ್ಳಿ–2 | 1 | 1 | ತುಮಕೂರ್ಲಹಳ್ಳಿ–2 | 1 |

**ಅಮ್ಲಾನ್ ಆದಿತ್ಯ ಬಿಸ್ವಾಸ್**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

# ವಿಶೇಷ ಪತ್ರಿಕೆ

| ಭಾಗ – VI | ಬೆಂಗಳೂರು, ಬುಧವಾರ, ಫೆಬ್ರವರಿ ೧೭, ೨೦೧೦ (ಮಾಘ ೨೮, ಶಕ ವರ್ಷ ೧೯೩೧) | ನಂ. ೧೭೦ |
|---|---|---|

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ
## ಅಧಿಸೂಚನೆ

**ನಂ. ಚುನಾವಣೆ ಸಿಆರ್.95–2/2009–10, ದಿನಾಂಕ : 16ನೇ ಫೆಬ್ರವರಿ, 2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ 5ನೇ ಪ್ರಕರಣದ ಉಪ ಪ್ರಕರಣ (5)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸುತ್ತಾ ಆಮ್ಲಾನ್ ಆದಿತ್ಯ ಬಿಸ್ವಾಸ್ ಚಿತ್ರದುರ್ಗ ಜಿಲ್ಲಾಧಿಕಾರಿ ಆದ ನಾನು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ, ಈ ಕೆಳಕಂಡ ಗ್ರಾಮ ಪಂಚಾಯ್ತಿಗೆ ಸಂಭಂಧಿಸಿದಂತೆ ಜನವರಿ 2010ರ 18ನೇ ದಿನಾಂಕದಂದು ಅಧಿಸೂಚಿಸಿದ ಚುನಾವಣೆ ಸಿ.ಆರ್. 95–2/2009.10ರ ಸಂಖ್ಯೆಯ ಅಧಿಸೂಚನೆಯನ್ನು ಈ ಮುಂದಿನಂತೆ ತಿದ್ದುಪಡಿ ಮಾಡಿರುತ್ತೇನೆ.

**ಕೋಷ್ಟಕ – I**

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಅಂಕಣ ಸಂಖ್ಯೆ | ಹಾಲಿ ಇರುವುದು | ತಿದ್ದುಪಡಿ ಮಾಡಿರುವುದು. |
|---|---|---|---|---|
| 05.ದೇವರೆಡ್ಡಿಹಳ್ಳಿ | 5, ಗೌರಸಮುದ್ರ | 2 | ಗೌರಸಮುದ್ರ | ಗೌರಸಮುದ್ರ ಕಾವಲ್ |

**ಕೋಷ್ಟಕ – II**

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಸ್ಥಾನಗಳನ್ನು ಮೀಸಲಿರಿಸಲಾದ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | | | ಮೀಸಲಿರಿಸಿದ ಸ್ಥಾನಗಳಿಂದ ಮಹಿಳೆಯರಿಗಾಗಿ ಮೀಸಲಿರಿಸಿದ ಪ್ರಾದೇಶಿಕ ಚುನಾವಣಾ ಕ್ಷೇತ್ರದ | | |
|---|---|---|---|---|---|---|
| | ಕ್ರ.ಸಂ | ಹೆಸರು | ಸ್ಥಾನ | ಕ್ರ.ಸಂ | ಹೆಸರು | ಸ್ಥಾನ |
| ಹಿಂದುಳಿದ "ಅ" ವರ್ಗ | | | | | | |
| 05.ದೇವರೆಡ್ಡಿಹಳ್ಳಿ | 4 | ಗೌರಸಮುದ್ರ ಕಾವಲ್ | 1 | | | |

**ಕೋಷ್ಟಕ – III**

**ಪ್ರಾದೇಶಿಕ ಚುನಾವಣಾ ಕ್ಷೇತ್ರಗಳಲ್ಲಿ ಮೀಸಲಿಡದ ಸ್ಥಾನಗಳು ಹಾಗೂ ಈ ಪೈಕಿ ಮಹಿಳೆಯರಿಗಾಗಿ ಮೀಸಲಾಗಿಟ್ಟ ಸ್ಥಾನಗಳು**

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಸ್ಥಾನಗಳನ್ನು ಮೀಸಲಿಡದ ಪ್ರಾದೇಶಿಕ ಚುನಾವಣಾ ಕ್ಷೇತ್ರದ | | | ಮೀಸಲಿಡದ ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಸ್ಥಾನಗಳನ್ನು ಮೀಸಲಿಟ್ಟಿರುವ ಚುನಾವಣಾ ಕ್ಷೇತ್ರದ | | |
|---|---|---|---|---|---|---|
| | ಕ್ರ.ಸಂ | ಹೆಸರು | ಸ್ಥಾನ | ಕ್ರ.ಸಂ | ಹೆಸರು | ಸ್ಥಾನ |
| 05.ದೇವರೆಡ್ಡಿಹಳ್ಳಿ | 4 | ಗೌರಸಮುದ್ರ ಕಾವಲ್ | 1 | 2 | ಗೌರಸಮುದ್ರ ಕಾವಲ್ | 1 |
| 12.ಗೌಡಗೆರೆ | 2 | ಜೋಗಿಹಟ್ಟಿ–1 | 2 | 2 | ಜೋಗಿಹಟ್ಟಿ–1 | 1 |
| 31.ದೇವರಮರಿಕುಂಟೆ | 4 | ಯಲಗಟ್ಟ–2 | 1 | 2 | ಯಲಗಟ್ಟ–2 | 1 |

**ಅಮ್ಲಾನ್ ಆದಿತ್ಯ ಬಿಸ್ವಾಸ್**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

**ವಿಶೇಷ ಪತ್ರಿಕೆ**

| ಭಾಗ – VI | ಬೆಂಗಳೂರು, ಬುಧವಾರ, ಫೆಬ್ರವರಿ ೧೭, ೨೦೧೦ (ಮಾಘ ೨೮, ಶಕ ವರ್ಷ ೧೯೩೧) | ನಂ. ೧೨೧ |
|---|---|---|

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಅಧಿಸೂಚನೆ**

**ನಂ. ಚುನಾವಣೆ ಸಿಆರ್.95–5/2009–10, ದಿನಾಂಕ : 16ನೇ ಫೆಬ್ರವರಿ, 2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ 5ನೇ ಪ್ರಕರಣದ ಉಪ ಪ್ರಕರಣ (5)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸುತ್ತಾ ಆಮ್ಲಾನ್ ಆದಿತ್ಯ ಬಿಸ್ವಾಸ್ ಚಿತ್ರದುರ್ಗ ಜಿಲ್ಲಾಧಿಕಾರಿ ಆದ ನಾನು ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕಿನ, ಈ ಕೆಳಕಂಡ ಗ್ರಾಮ ಪಂಚಾಯ್ತಿಗೆ ಸಂಭಂಧಿಸಿದಂತೆ ಜನವರಿ 2010ರ 18ನೇ ದಿನಾಂಕದಂದು ಅಧಿಸೂಚಿಸಿದ ಚುನಾವಣೆ ಸಿ.ಆರ್. 95–5/2009.10ರ ಸಂಖ್ಯೆಯ ಅಧಿಸೂಚನೆಯನ್ನು ಈ ಮುಂದಿನಂತೆ ತಿದ್ದುಪಡಿ ಮಾಡಿರುತ್ತೇನೆ.

**ಕೋಷ್ಠಕ – I**

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಅಂಕಣ ಸಂಖ್ಯೆ | ಹಾಲಿ ಇರುವುದು | ತಿದ್ದುಪಡಿ ಮಾಡಿರುವುದು. |
|---|---|---|---|---|
| 10.ಚಿತ್ರಹಳ್ಳಿ | 1.ಚಿತ್ರಹಳ್ಳಿ | 3 | ಚಿತ್ರಹಳ್ಳಿ ಪೂರ್ಣ ಗ್ರಾಮ | ಚಿತ್ರಹಳ್ಳಿ ಪೂರ್ಣ ಗ್ರಾಮ |
| | | | ವಡ್ಡರಹಟ್ಟಿ(ಮ) | |
| 10.ಚಿತ್ರಹಳ್ಳಿ | 2.ಚಿತ್ರಹಳ್ಳಿಗೊಲ್ಲರಹಟ್ಟಿ | 3 | ಚಿತ್ರಹಳ್ಳಿಗೊಲ್ಲರಹಟ್ಟಿ (ಮ) | ಚಿತ್ರಹಳ್ಳಿಗೊಲ್ಲರಹಟ್ಟಿ (ಮ) |
| | | | | ವಡ್ಡರಹಟ್ಟಿ(ಮ) |

**ಕೋಷ್ಠಕ – III**

**ಪ್ರಾದೇಶಿಕ ಚುನಾವಣಾ ಕ್ಷೇತ್ರಗಳಲ್ಲಿ ಮೀಸಲಿಡದ ಸ್ಥಾನಗಳು ಹಾಗೂ ಈ ಪೈಕಿ ಮಹಿಳೆಯರಿಗಾಗಿ ಮೀಸಲಾಗಿಟ್ಟ ಸ್ಥಾನಗಳು**

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಸ್ಥಾನಗಳನ್ನು ಮೀಸಲಿಡದ ಪ್ರಾದೇಶಿಕ ಚುನಾವಣಾ ಕ್ಷೇತ್ರದ | | | ಮೀಸಲಿಡದ ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಸ್ಥಾನಗಳನ್ನು ಮೀಸಲಿಟ್ಟಿರುವ ಚುನಾವಣಾ ಕ್ಷೇತ್ರದ | | |
|---|---|---|---|---|---|---|
| | ಕ್ರ.ಸಂ | ಹೆಸರು | ಸ್ಥಾನ | ಕ್ರ.ಸಂ | ಹೆಸರು | ಸ್ಥಾನ |
| 11.ದುಮ್ಮಿ | 1 | ದುಮ್ಮಿ–1 | 2 | | | |

**ಅಮ್ಲಾನ್ ಆದಿತ್ಯ ಬಿಸ್ವಾಸ್**
ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ

**ವಿಶೇಷ ಪತ್ರಿಕೆ**

| ಭಾಗ – VI | ಬೆಂಗಳೂರು, ಬುಧವಾರ, ಫೆಬ್ರವರಿ ೧೭, ೨೦೧೦ (ಮಾಘ ೨೮, ಶಕ ವರ್ಷ ೧೯೩೧) | ನಂ. ೧೨೨ |
|---|---|---|

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಅಧಿಸೂಚನೆ**

**ನಂ. ಚುನಾವಣೆ ಸಿಆರ್.95–6/2009–10, ದಿನಾಂಕ : 16ನೇ ಫೆಬ್ರವರಿ, 2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ 5ನೇ ಪ್ರಕರಣದ ಉಪ ಪ್ರಕರಣ (5)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸುತ್ತಾ ಆಮ್ಲಾನ್ ಆದಿತ್ಯ ಬಿಸ್ವಾಸ್ ಚಿತ್ರದುರ್ಗ ಜಿಲ್ಲಾಧಿಕಾರಿ ಆದ ನಾನು ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ, ಈ ಕೆಳಕಂಡ ಗ್ರಾಮ ಪಂಚಾಯ್ತಿಗೆ ಸಂಭಂಧಿಸಿದಂತೆ ಜನವರಿ 2010ರ 18ನೇ ದಿನಾಂಕದಂದು ಅಧಿಸೂಚಿಸಿದ ಚುನಾವಣೆ ಸಿ.ಆರ್. 95–6/2009.10ರ ಸಂಖ್ಯೆಯ ಅಧಿಸೂಚನೆಯನ್ನು ಈ ಮುಂದಿನಂತೆ ತಿದ್ದುಪಡಿ ಮಾಡಿರುತ್ತೇನೆ.

**ಕೋಷ್ಠಕ – I**

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಅಂಕಣ ಸಂಖ್ಯೆ | ಹಾಲಿ ಇರುವುದು | ತಿದ್ದುಪಡಿ ಮಾಡಿರುವುದು. |
|---|---|---|---|---|
| 20.ಕಂಗುವಳ್ಳಿ | 6, ಕೊಂಡಜ್ಜಿ | 3 | ಕೊಂಡಜ್ಜಿ (ಅ)ಪೂರ್ಣ ಗ್ರಾಮ | ಕೊಂಡಜ್ಜಿ(ಅ)ಪೂರ್ಣ ಗ್ರಾಮ |

| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಅಂಕಣ ಸಂಖ್ಯೆ | ಹಾಲಿ ಇರುವುದು | ತಿದ್ದುಪಡಿ ಮಾಡಿರುವುದು. |
|---|---|---|---|---|
| | | | ಲಂಬಾಣಿಹಟ್ಟಿ(ಮ) ಪೂರ್ಣ ಗ್ರಾಮ | ಲಂಬಾಣಿಹಟ್ಟಿ(ಮ) ಪೂರ್ಣ ಗ್ರಾಮ |
| | | | ವೀರಾಪುರ(ಬೆ) | ವೀರಾಪುರ(ಬೆ) |
| | | | | ತಿಪ್ಪಜ್ಜನಹಳ್ಳಿ(ಬೆ) |

**ಅಮ್ಲಾನ್ ಆದಿತ್ಯ ಬಿಸ್ವಾಸ್**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೧೭, ೨೦೧೦ (ಮಾಘ ೨೮, ಶಕ ವರ್ಷ ೧೯೩೧) | ನಂ. ೧೭೩ |
|---|---|---|

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂ. ಸಾರಿಇ : 84 : ಸಾಇಪ : 2009, ಬೆಂಗಳೂರು, ದಿನಾಂಕ : 10ನೇ ಫೆಬ್ರವರಿ, 2010**

ದಿನಾಂಕ : 13–7–1993ರ ಅಧಿಸೂಚನೆ ಸಂಖ್ಯೆ ಹೆಚ್‌ಟಿಡಿ 89 ಟಿಎಂಇ 93 ರ ಕ್ರಮ ಸಂಖ್ಯೆ (3) "ಬೆಂಗಳೂರು ಗ್ರಾಮಾಂತರ ಜಿಲ್ಲೆ" ಗೆ ಸಂಬಂಧಿಸಿದಂತೆ ಮಾತ್ರ ರಚಿಸಿದ್ದ ಸಮಿತಿಯನ್ನು ಮಾರ್ಪಾಡು ಮಾಡಿ ಮೋಟಾರು ವಾಹನ ಅಧಿನಿಯಮ 1988 ರ ಸೆಕ್ಷನ್ 215(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಸದಸ್ಯರುಗಳನ್ನು ಒಳಗೊಂಡಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ರಸ್ತೆ ಸುರಕ್ಷತಾ ಸಮಿತಿಯನ್ನು ಸರ್ಕಾರವು ಪುನರ್ ರಚಿಸಿದೆ.

| | | | |
|---|---|---|---|
| 1. | ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ | – | ಅಧ್ಯಕ್ಷರು |
| 2. | ಉಪ ಪೊಲೀಸ್ ಆಯುಕ್ತರು, ಬೆಂಗಳೂರು (ಪಶ್ಚಿಮ) ವಲಯ (ಟ್ರಾಫಿಕ್) | – | ಸದಸ್ಯರು |
| 3. | ಪೊಲೀಸ್ ಅಧೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ | – | ಸದಸ್ಯರು |
| 4. | ಕಾರ್ಯಪಾಲಕ, ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ | – | ಸದಸ್ಯರು |
| 5. | ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ 4 ಬೆಂಗಳೂರು. | – | ಸದಸ್ಯರು |
| 6. | ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ 7 ಬೆಂಗಳೂರು. | – | ಸದಸ್ಯರು |
| 7. | ಕಾರ್ಯಪಾಲಕ, ಅಭಿಯಂತರರು, ಬೆಂಗಳೂರು ವಿಭಾಗ, ವಿಧಾನ ವೀದಿ, ಬೆಂಗಳೂರು | – | ಸದಸ್ಯರು |
| 8. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಬೆಂಗಳೂರು – 09 | – | ಸದಸ್ಯರು |
| 9. | ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಗ್ರಾಮಾಂತರ ವಲಯ. | – | ಸದಸ್ಯರು |
| 10. | ಉಪ ನಿರ್ದೇಶಕರು (ಡಿಸೈನ್ ಗ್ರೂಪ್) ನಗರ ಯೋಜನಾ ಇಲಾಖೆ. | – | ಸದಸ್ಯರು |
| 11. | ಉಪ ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೆಂಗಳೂರು | – | ಸದಸ್ಯರು |
| 12. | ಪ್ರಾಜೆಕ್ಟ್ ಡೈರೆಕ್ಟರ್, ರಾಷ್ಟ್ರೀಯ ಹೆದ್ದಾರಿಗಳ ಪ್ರಾಧಿಕಾರ, ಬೆಂಗಳೂರು. | – | ಸದಸ್ಯರು |
| 13. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | – | ಸದಸ್ಯರು |
| 14. | ಅಬಕಾರಿ ಉಪ ಆಯುಕ್ತರು, ಬೆಂಗಳೂರು ಗ್ರಾಮಾಂತರ ಜಿಲ್ಲೆ | – | ಸದಸ್ಯರು |
| 15. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ. | – | ಸದಸ್ಯರು |
| 16. | ಜಿಲ್ಲಾ ಗಣಿ ಮತ್ತು ಭೂ ವಿಜ್ಞಾನ ಅಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | – | ಸದಸ್ಯರು |
| 17. | ದೂರ ಸಂಪರ್ಕಾಧಿಕಾರಿಗಳು, ಬಿಎಸ್‌ಎನ್‌ಎಲ್, ಲಿ. ಬೆಂಗಳೂರು. | – | ಸದಸ್ಯರು |

| | | | |
|---|---|---|---|
| 18. | ಕಾರ್ಯ ನಿರ್ವಾಹಕ ಅಭಿಯಂತರರು, ಬೆಸ್ಕಾಂ, ಬೆಂಗಳೂರು ಗ್ರಾಮಾಂತರ ಜಿಲ್ಲೆ | – | ಸದಸ್ಯರು |
| 19. | ನಿಯಂತ್ರಣಾಧಿಕಾರಿಗಳು, ಕಾನೂನು ಮಾಪಕ ಮತ್ತು ಅಳತೆಗಳ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | – | ಸದಸ್ಯರು |
| 20. | ಪ್ರಾದೇಶಿಕ ಸಾರಿಗೆ ಅಧಿಕಾರಿ, ನೆಲಮಂಗಲ, ಬೆಂಗಳೂರು. | – | ಸದಸ್ಯ ಕಾರ್ಯದರ್ಶಿ |
| 21. | ಬೆಂಗಳೂರು ಜಿಲ್ಲೆಯ ಎಲ್ಲಾ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು | – | ವಿಶೇಷ ಆಹ್ವಾನಿತರು |
| 22. | ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರಕ್ಷಕ ಉಪ ನಿರೀಕ್ಷಕರು | – | ವಿಶೇಷ ಆಹ್ವಾನಿತರು |
| 23. | ಕರ್ನಾಟಕ ಗ್ರಾಮಾಂತರ ರಸ್ತೆ ಅಭಿವೃದ್ಧಿ ನಿಗಮ ಅಧಿಕಾರಿಗಳು. | – | ವಿಶೇಷ ಆಹ್ವಾನಿತರು |

ಉಳಿದಂತೆ ಅಧಿಸೂಚನೆ ಸಂಖ್ಯೆ ಹೆಚ್.ಟಿ.ಡಿ 89 ಟಿಎಂಇ 93, ದಿನಾಂಕ : 13–7–93 ರಲ್ಲಿ ಇನ್ನಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನರಸಿಂಹರಾಜು**
ಪೀಠಾಧಿಕಾರಿ (ಪ್ರ), ಸಾರಿಗೆ ಇಲಾಖೆ

## ವಿಶೇಷ ಪತ್ರಿಕೆ


| ಭಾಗ – I | ಬೆಂಗಳೂರು, ಬುಧವಾರ, ಫೆಬ್ರವರಿ ೧೭, ೨೦೧೦ (ಮಾಘ ೨೮, ಶಕ ವರ್ಷ ೧೯೩೧) | ನಂ. ೧೭೪ |
|---|---|---|


### ನಗರಾಭಿವೃದ್ಧಿ ಸಚಿವಾಲಯ

### ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ನಿರ್ಮಿಸಲಿರುವ ನಾಡಪ್ರಭು ಕೆಂಪೇಗೌಡ ಬಡಾವಣೆಯ ಯೋಜನೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ ಕಲಂ 18(3) ರನ್ವಯ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರ ಪ್ರಸ್ತಾವನೆಯ ಸಂಖ್ಯೆ:ಬೆಂಅಪ್ರಾ /2839/2009-10, ದಿನಾಂಕ:27-01-2010.

2) ಸರ್ಕಾರದ ಆದೇಶ ಸಂಖ್ಯೆ:ನಅಇ 427 ಬೆಂಭೂಸ್ವಾ 2007, ದಿನಾಂಕ:2-4-2008.

**ಪ್ರಸ್ತಾವನೆ:**

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸಾರ್ವಜನಿಕರಿಗೆ ನಿವೇಶನಗಳನ್ನು ಹಂಚಿಕೆ ಮಾಡುವ ಹಾಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಮೂಲ ಉದ್ದೇಶದ ಹಿನ್ನೆಲೆಯಲ್ಲಿ, "ನಾಡಪ್ರಭು ಕೆಂಪೇಗೌಡ ಬಡಾವಣೆ" ಎಂಬ ಹೊಸ ಬಡಾವಣೆ ರಚನೆಯ ಕಾರ್ಯವನ್ನು ಕೈಗೆತ್ತಿಗೊಳ್ಳಲು ಉದ್ದೇಶಿಸಿದ್ದು, ಮೇಲೆ ಓದಲಾದ (2)ರಲ್ಲಿ ಸರ್ಕಾರಿ ಆದೇಶ ಸಂಖ್ಯೆ:ನಅಇ 427 ಬೆಂಭೂಸ್ವಾ 2007, ದಿನಾಂಕ:2–04–2008ರ ಆದೇಶದಲ್ಲಿ ಪ್ರಸ್ತಾಪಿತ ನೂತನ ಬಡಾವಣೆಗಾಗಿ ಭೂಸ್ವಾಧೀನ ಪಡಿಸಿಕೊಳ್ಳಲಾಗುವ ಪ್ರತಿ ಎಕರೆ ಜಮೀನಿನಲ್ಲಿ ಶೇ.45 ರಷ್ಟು ನಾಗರೀಕ ಸೌಲಭ್ಯಕ್ಕೆ ಮೀಸಲಿಟ್ಟು, ಉಳಿಕೆ ಶೇ.55 ರಷ್ಟು ಜಮೀನನ್ನು ವಸತಿ ನಿವೇಶನವನ್ನಾಗಿ ವಿಂಗಡಿಸಿ, ಶೇ.60:40ರ ಅನುಪಾತದನ್ವಯ ಪ್ರತಿ ಎಕರೆಗೆ ಶೇ.40ರಷ್ಟು ಅಂದರೆ 9583 ಚ.ಅಡಿ ಅಭಿವೃದ್ಧಿಪಡಿಸಿದ ನಿವೇಶನಗಳನ್ನು ಅಥವಾ ಪರಿಹಾರ ಧನವನ್ನು ಭೂ ಮಾಲೀಕರಿಗೆ ನೀಡಲು (ಭೂಮಾಲೀಕರ ಕೋರಿಕೆಯಂತೆ ಭಾಗಶ: ಪರಿಹಾರ ಧನ ಹಾಗೂ ಭಾಗಶ: ಅಭಿವೃದ್ಧಿಪಡಿಸಿದ ನಿವೇಶನ ಎರಡನ್ನು ಪಡೆಯಲು ಅರ್ಹರಿರುತ್ತಾರೆ) ಸರ್ಕಾರದ ಅನುಮೋದನೆ ನೀಡಲಾಗಿದೆ.

ಈ ಸಂಬಂಧವಾಗಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶೀಗೇಹಳ್ಳಿ, ಕನ್ನಲ್ಲಿ, ಕೊಡಿಗೇಹಳ್ಳಿ ಮತ್ತು ಮಂಗನಹಳ್ಳಿ ಹಾಗೂ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ, ಭೀಮನಕುಪ್ಪೆ, ಭೀಮನಕುಪ್ಪೆ–ರಾಮಸಾಗರ, ಸೂಲಿಕೆರೆ, ಕೆಂಚನಪುರ, ರಾಮಸಂದ್ರ, ಕೊಮ್ಮಘಟ್ಟ–ಕೃಷ್ಣಸಾಗರ ಹಾಗೂ ಚಳ್ಳಘಟ್ಟ ಗ್ರಾಮಗಳಿಗೆ

ಸೇರಿರುವ ಒಟ್ಟು 4814 ಎಕರೆ 15 ಗುಂಟೆ ಜಮೀನನ್ನು "ನಾಡಪ್ರಭು ಕೆಂಪೇಗೌಡ ಬಡಾವಣೆ" ಗಾಗಿ ಭೂಸ್ವಾಧೀನಪಡಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧಿನಿಯಮ 1976ರ ಕಲಂ 17(1)ರ ಅಡಿಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಅಧಿಸೂಚನೆ ಸಂಖ್ಯೆ:ಬಿಡಿಎ/ಕಮೀಶನರ್/ಡಿಸಿ(ಎಲ್.ಎ)/ಎಎಲ್ಎಓ/158/08–09, ದಿನಾಂಕ:21–5–2008 ರಲ್ಲಿ ಪ್ರಾರಂಭಿಕ ಅಧಿಸೂಚನೆಯನ್ನು ಹೊರಡಿಸಿ ದಿನಾಂಕ:22–5–2008 ರಂದು ವಿಶೇಷ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚುರಪಡಿಸಿರುತ್ತದೆ.

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಭೆಯ ದಿನಾಂಕ:12–01–2010ರ ವಿಷಯ ಸಂಖ್ಯೆ: 340/09ರಲ್ಲಿ ಈ ಯೋಜನೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧಿನಿಯಮ 1976ರ ಕಲಂ 18(3) ರನ್ವಯ ಸರ್ಕಾರದ ಮಂಜೂರಾತಿ ಪಡೆಯಲು, ಒಟ್ಟು 4043 ಎಕರೆ 27 ಗುಂಟೆ ಜಮೀನುಗಳಿಗೆ ಅಂತಿಮ ಅಧಿಸೂಚನೆ ಹೊರಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ನಿರ್ಣಯ ಕೈಗೊಂಡಿರುತ್ತದೆ.

ಅದರಂತೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ದಿನಾಂಕ:21–5–2008ರಂದು ಪ್ರಾರಂಭಿಕ ಅಧಿಸೂಚನೆಯನ್ನು ಹೊರಡಿಸಿದ್ದ ಸಮಯದಲ್ಲಿ ಒಟ್ಟಾರೆ 4814 ಎಕರೆ 15 ಗುಂಟೆ ಜಮೀನಿನಲ್ಲಿ ಕೆಲವೊಂದು ಸರ್ವೆ ನಂಬರ್‌ಗಳ ಎದುರು ನಮೂದಿಸಿರುವ ವಿಸ್ತೀರ್ಣವು ಭೌತಿಕ ಸರ್ವೆ ಸಮಯದಲ್ಲಿ ವ್ಯತ್ಯಾಸ ಕಂಡು ಬಂದಿದ್ದು, ಒಟ್ಟು ವಿಸ್ತೀರ್ಣವು 4660 ಎಕರೆ 01 ಗುಂಟೆ ಇದ್ದು, ಈ ಜಮೀನಿನ ಪೈಕಿ ಒಟ್ಟು 616 ಎಕರೆ 14 ಗುಂಟೆ ಜಮೀನನ್ನು ಕೈಬಿಟ್ಟು ಉಳಿಕೆ 4043 ಎಕರೆ 27 ಗುಂಟೆ ಜಮೀನಿನಲ್ಲಿ ಈ ಕೆಳಗಿನ ಯೋಜನಾ ವಿವರ ಒಳಗೊಂಡ "ನಾಡಪ್ರಭು ಕೆಂಪೇಗೌಡ ಬಡಾವಣೆ" ಯೋಜನೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ ಕಲಂ 18(3)ರ ಅನುಸಾರ ಈ ಕೆಳಕಂಡ ವಿವರಗಳೊಂದಿಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

| ಕ್ರ. ಸಂ. | ಬಡಾವಣೆಯ ಹೆಸರು | ಅಂದಾಜು ವೆಚ್ಚ (ಕೋಟಿ ರೂ. ಗಳಲ್ಲಿ) | ಭೂಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ವಿಸ್ತೀರ್ಣ (ಎಕರೆ–ಗುಂಟೆ) | ರಚಿಸಲು ಉದ್ದೇಶಿಸ ಲಾಗಿರುವ ನಿವೇಶನಗಳ ಸಂಖ್ಯೆ | ನಿರೀಕ್ಷಿಸ ಲಾಗಿರುವ ವಸೂಲಾತಿ (ಕೋಟಿ ರೂ. ಗಳಲ್ಲಿ) | ನಿರೀಕ್ಷಿಸಲಾಗಿರುವ ಒಟ್ಟು ಉಳಿತಾಯ (ಕೋಟಿ ರೂ. ಗಳಲ್ಲಿ) |
|---|---|---|---|---|---|---|
| 1. | ನಾಡಪ್ರಭು ಕೆಂಪೇಗೌಡ ಬಡಾವಣೆ | 2408/– | 4043–27 | 54,800 | 2460/– | 52.00 |

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬೆಂಭೂಸ್ವಾ 2010, ಬೆಂಗಳೂರು, ದಿನಾಂಕ.16–02–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, 4043 ಎಕರೆ 27 ಗುಂಟೆ ಜಮೀನಿನಲ್ಲಿ "ನಾಡಪ್ರಭು ಕೆಂಪೇಗೌಡ ಬಡಾವಣೆ"ಯನ್ನು ಒಟ್ಟು ರೂ.2408-00 ಕೋಟಿ ರೂಪಾಯಿಗಳ (ಎರಡು ಸಾವಿರದ ನಾಲ್ಕು ನೂರು ಎಂಟು ಕೋಟಿಗಳು ಮಾತ್ರ) ವೆಚ್ಚದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಕೈಗೊಳ್ಳಲಿರುವ ಬಡಾವಣೆ ನಿರ್ಮಾಣ ಯೋಜನೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧಿನಿಯಮ 1976ರ ಕಲಂ 18(3)ರ ಅಡಿಯಲ್ಲಿ ಈ ಕೆಳಕಂಡ ಷರತ್ತಿಗೊಳಪಡಿಸಿ ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

1) ಸರ್ಕಾರದಿಂದ ಯಾವುದೇ ಹಣಕಾಸಿನ ನೆರವನ್ನು ಅಪೇಕ್ಷಿಸದೇ ಈ ಯೋಜನೆಯ ಸಂಪೂರ್ಣ ವೆಚ್ಚವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವೇ ತನ್ನ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು;

2) ಪ್ರಸ್ತುತ ಯೋಜನೆಗೆ ಪ್ರಾಧಿಕಾರವು ಪಡೆಯಬಹುದಾದ ಯಾವುದೇ ಸಾಲಗಳಿಗೆ ಸರ್ಕಾರವು ಖಾತರಿಯನ್ನು ನೀಡುವುದಿಲ್ಲ ಮತ್ತು ಸದರಿ ಸಾಲವನ್ನು ತೀರಿಸುವ ಹೊಣೆ ಪ್ರಾಧಿಕಾರದ್ದಾಗಿರುತ್ತದೆ;

3) ಪ್ರಸ್ತುತ ಯೋಜನೆಗೆ ಸಂಬಂಧಿಸಿದಂತೆ ಪ್ರಾಧಿಕಾರವು ಮಾಡಿಕೊಳ್ಳುವ ಯಾವುದೇ ವ್ಯವಹಾರಗಳಿಗೆ ಸರ್ಕಾರವು ಭಾಗಿಯಾಗುವುದಿಲ್ಲ.

4) ಪ್ರಸ್ತುತ ಯೋಜನೆಗೆ ಸಂಬಂಧಿಸಿದಂತೆ ಭೂ ಉಪಯೋಗ ಬದಲಾವಣೆ ಮಾಡಿಕೊಳ್ಳುವುದಾದಲ್ಲಿ ಅದಕ್ಕೆ ಸರ್ಕಾರದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಪೆರುಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

| ಭಾಗ - V | ಬೆಂಗಳೂರು, ಬುಧವಾರ, ಫೆಬ್ರವರಿ ೧೭, ೨೦೧೦ (ಮಾಘ ೨೮, ಶಕ ವರ್ಷ ೧೯೩೧) | ನಂ. ೧೭೫ |
|---|---|---|

**ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಮತ್ತು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿಯ ಗ್ರೂಪ್ 'ಡಿ' ಹುದ್ದೆಗಳ ನೇರ ನೇಮಕಾತಿ ಪ್ರಾಧಿಕಾರಿಗಳು ಇವರ ನಡುವಳಿಗಳು.**

**ಅಧಿಸೂಚನೆ**

**ಸಂಖ್ಯೆ : ಕ.ಲೋ/ಸಿಬ್ಬಂದಿ-1/50/2008-09, ಬೆಂಗಳೂರು, ದಿನಾಂಕ : 17ನೇ ಫೆಬ್ರವರಿ, 2010**

**ವಿಷಯ :** ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಗ್ರೂಪ್ 'ಡಿ' ವೃಂದಗಳಲ್ಲಿ ಖಾಲಿಯಿರುವ ಹುದ್ದೆಗಳನ್ನು ನೇರ ನೇಮಕಾತಿಯಿಂದ ತುಂಬುವ ಬಗ್ಗೆ.

1. ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಗ್ರೂಪ್ 'ಡಿ' ವೃಂದದ ಹುದ್ದೆಗಳಾದ ದಲಾಯತ್ / ದಲಾಯತ್-ಕಂ-ಸ್ವೀಪರ್ / ಸ್ವೀಪರ್ / ಸೈಕಲ್ ಆರ್ಡರ್ಲಿ / ಹೋಂ ಆರ್ಡರ್ಲಿ / ರಾತ್ರಿ ಕಾವಲುಗಾರರು ಹುದ್ದೆಗಳನ್ನು ನೇರ ನೇಮಕಾತಿಯಿಂದ ತುಂಬಲು ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ.

2. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ **17-04-2010 ರ** ಸಂಜೆ 4.00 ಗಂಟೆ. ತದನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ನಿಗದಿಪಡಿಸಿದ ಕೊನೆಯ ದಿನಾಂಕ ಸಾರ್ವತ್ರಿಕ ರಜೆಯಾಗಿದ್ದರೆ ತದನಂತರದ ಕಛೇರಿ ಕಾರ್ಯ ನಿರ್ವಹಿಸುವ ದಿನವು ಅರ್ಜಿಯನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.

3. ಅರ್ಜಿ ಸಲ್ಲಿಸುವ ವಿಳಾಸ ***ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬಹುಮಹಡಿ ಕಟ್ಟಡ, ಡಾ: ಬಿ.ಆರ್.ಅಂಬೇಡ್ಕರ್ ವೀದಿ, ಬೆಂಗಳೂರು-560001.***

4. ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿ ಎಲ್ಲ ಮಾಹಿತಿಗಳನ್ನು ತುಂಬಿ ಸಲ್ಲಿಸತಕ್ಕದ್ದು. ಅಪೂರ್ಣ ಅರ್ಜಿಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು. ನಿಗದಿಪಡಿಸಿದ ಅರ್ಜಿ ನಮೂನೆಗಳು ಸರ್ಕಾರಿ ಪುಸ್ತಕ ಮಳಿಗೆ ಅಥವಾ ಅಧಿಕೃತ ಮಾರಾಟಗಾರರಿಂದ ನಿಗದಿಪಡಿಸಿದ ಶುಲ್ಕವನ್ನು ಸಂದಾಯ ಮಾಡಿ ಖರೀದಿಸಬಹುದು. ಈ ನಿಗದಿಪಡಿಸಿದ ಅರ್ಜಿ ನಮೂನೆಗಳನ್ನು ಹೊರತುಪಡಿಸಿ ಬೇರಾವುದೇ ನಮೂನೆಯಲ್ಲಿ (ಜೆರಾಕ್ಸ್ ಪ್ರತಿಯಲ್ಲಿ) ಅರ್ಜಿ ಸಲ್ಲಿಸಿದರೆ ಅವುಗಳನ್ನು ಪರಿಗಣಿಸಲಾಗುವುದಿಲ್ಲ.

5. **ಖಾಲಿ ಹುದ್ದೆಗಳ ವಿವರ:**

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಖಾಲಿ ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1. | ಗ್ರೂಪ್ 'ಡಿ' | 51 | 4800-100-6000-125-6500-150-7100-175-7275 |

6. **ಖಾಲಿ ಹುದ್ದೆಗಳ ವರ್ಗೀಕರಣ:**

ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 8 ಸಹೀಮ 95, ದಿನಾಂಕ 20-6-95, ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 97 ಸೇನನಿ 2002, ದಿನಾಂಕ 22-11-2002 ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 4-1-2008ರ ಪ್ರಕಾರ ಹುದ್ದೆಗಳನ್ನು ಕೆಳಕಂಡಂತೆ ವರ್ಗೀಕರಿಸಲಾಗಿದೆ.

| ಮೀಸಲಾತಿ | ಒಳ ಮೀಸಲಾತಿ | | | | | | | |
|---|---|---|---|---|---|---|---|---|
| | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನೆಯಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಮಾಜಿ ಸೈನಿಕ | ಅಂಗವಿಕಲ | ಒಟ್ಟು |
| ಸಾಮಾನ್ಯ ಅರ್ಹತೆ | 05 | 08 | 07 | 01 | 01 | 02 | 02 | 26 |
| ಪರಿಶಿಷ್ಟ ಜಾತಿ | 01 | 03 | 03 | – | – | – | 01 | 08 |
| ಪರಿಶಿಷ್ಟ ಪಂಗಡ | – | 01 | – | – | – | – | – | 01 |
| ಪ್ರವರ್ಗ-1 | – | 01 | 01 | – | – | – | – | 02 |
| ಪ್ರವರ್ಗ-2'ಎ' | 01 | 03 | 03 | – | – | – | 01 | 08 |
| ಪ್ರವರ್ಗ-2'ಬಿ' | 01 | 01 | – | – | – | – | – | 02 |
| ಪ್ರವರ್ಗ-3'ಎ' | 01 | 01 | – | – | – | – | – | 02 |
| ಪ್ರವರ್ಗ-3'ಬಿ' | 01 | 01 | – | – | – | – | – | 02 |
| **ಒಟ್ಟು** | **10** | **19** | **14** | **01** | **01** | **02** | **04** | **51** |

7. **ವಿದ್ಯಾರ್ಹತೆ :–** ಅಭ್ಯರ್ಥಿಗಳು 7ನೇ ತರಗತಿ ಪರೀಕ್ಷೆಯನ್ನು ಪಾಸುಮಾಡಿರತಕ್ಕದ್ದು (ಈ ಸಂಬಂಧ ಅಂಕಪಟ್ಟಿ ಪ್ರತಿಗಳನ್ನು ಅರ್ಜಿಗಳ ಜೊತೆಗೆ ಲಗತ್ತಿಸತಕ್ಕದ್ದು) ಮತ್ತು ಕನ್ನಡ ಭಾಷೆಯನ್ನು ಬರೆಯಲು ಹಾಗೂ ಓದುವ ಜ್ಞಾನ ಹೊಂದಿರುವುದು ಕಡ್ಡಾಯವಾಗಿರುತ್ತದೆ. ಒಂದುವೇಳೆ ಅಂಕಪಟ್ಟಿಗಳ ಪ್ರತಿಗಳನ್ನು ಲಗತ್ತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಮೂಲ ಅಂಕಪಟ್ಟಿಯನ್ನು ಈ ಕಛೇರಿಯು ಕೇಳಿದಾಗ ಪರಿಶೀಲನೆಗಾಗಿ ಸಲ್ಲಿಸತಕ್ಕದ್ದು.

**ಸೂಚನೆ:** 1) ಆಯ್ಕೆಗೊಂಡ ಅಭ್ಯರ್ಥಿಗಳು ಸಲ್ಲಿಸಿದ 7ನೇ ತರಗತಿ ಅಂಕಪಟ್ಟಿಯನ್ನು ಸಂಬಂಧಪಟ್ಟ ಶಿಕ್ಷಣಾಧಿಕಾರಿಗಳಿಗೆ ಪರಿಶೀಲನೆಗೆ ಕಳುಹಿಸಲಾಗುವುದು. ಅವಶ್ಯಕತೆ ಕಂಡುಬಂದರೆ, ಸಂಬಂಧಪಟ್ಟ ಮೂಲ ರಿಜಿಸ್ಟರ್‌ಗಳನ್ನು ಸಹ ಶಾಲೆಯಿಂದ ತರಿಸಿ ಪರಿಶೀಲಿಸಲಾಗುವುದು. ಒಂದುವೇಳೆ ಸಲ್ಲಿಸಿದ ಅಂಕಪಟ್ಟಿ ಸುಳ್ಳು ಎಂದು ಸಾಬೀತಾದರೆ ಅಂತಹ ಅಭ್ಯರ್ಥಿಗಳ ವಿರುದ್ಧ ಕಾನೂನು ರೀತ್ಯಾ ಕ್ರಮ ಜರುಗಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ರದ್ದುಪಡಿಸಲಾಗುವುದು.

2) ಅಭ್ಯರ್ಥಿಗಳು 7ನೇ ತರಗತಿ ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ಭಾಷೆಯನ್ನಾಗಿ ತೆಗೆದುಕೊಂಡು ಪಾಸುಮಾಡಿರತಕ್ಕದ್ದು. ಈ ಸಂಬಂಧ ದಾಖಲೆ ಪ್ರತಿ ಒದಗಿಸುವುದು ಹಾಗೂ ಗ್ರೂಪ್ 'ಡಿ' ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಗಳು ಹೋಂ ಗಾರ್ಡ್, ಸದಸ್ಯರಾಗಿ ಕಾರ್ಯ ನಿರ್ವಹಿಸುವ ಅವಶ್ಯಕತೆ ಬಂದರೆ, ಆ ಸೇವೆಗಳನ್ನು ಕೂಡ ನಿರ್ವಹಿಸಬೇಕಾಗುತ್ತದೆ.

8. **ನೇಮಕಾತಿ ವಿಧಾನ:**

ಕೆ.ಸಿ.ಎಸ್. (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ನಿಯಮ 10ರ ಪ್ರಕಾರ ನೇರ ನೇಮಕಾತಿಗೆ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ಮತ್ತು ಉದ್ಯೋಗ ವಿನಿಮಯ ಕೇಂದ್ರಗಳಿಂದ ಶಿಫಾರಸ್ಸು ಮಾಡಲಾದ ಅಭ್ಯರ್ಥಿಗಳು, ನಿಗದಿಪಡಿಸಿದ ವಿದ್ಯಾರ್ಹತೆಯ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇರೆಗೆ ಶ್ರೇಯಾಂಕ ಮತ್ತು ಮೀಸಲಾತಿ ಪ್ರಕಾರ ಆಯ್ಕೆ ಮಾಡಲಾಗುವುದು.

9. **ವಯೋಮಿತಿ :–**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಎಲ್ಲಾ ಮೀಸಲಾತಿ ಅಡಿ ಬರುವ ಅಭ್ಯರ್ಥಿಗಳು ಕನಿಷ್ಠ 18 ವರ್ಷಗಳು ವಯೋಮಿತಿಯನ್ನು ಹೊಂದಿರತಕ್ಕದ್ದು ಹಾಗೂ ಗರಿಷ್ಠ ವಯೋಮಿತಿ ಕೆಳಕಂಡಂತೆ ನಿಗದಿಪಡಿಸಲಾಗಿದೆ.

1) ಪರಿಶಿಷ್ಟ ಜಾತಿ / ಪರಿಶಿಷ್ಠ ಪಂಗಡ / ಪ್ರವರ್ಗ–I ಅಭ್ಯರ್ಥಿಗಳು 40 ವರ್ಷ ಮೀರಿರಬಾರದು.

2) ಪ್ರವರ್ಗ – II (ಎ), II (ಬಿ), III (ಎ), III (ಬಿ) ಅಭ್ಯರ್ಥಿಗಳು 38 ವರ್ಷ ಮೀರಿರಬಾರದು.

3) ಸಾಮಾನ್ಯ ಅರ್ಹತೆ ಅಭ್ಯರ್ಥಿಗಳು 35 ವರ್ಷ ಮೀರಿರಬಾರದು.

4) ವಯಸ್ಸಿನ ಮಿತಿಯನ್ನು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ರಾಜ್ಯ / ಕೇಂದ್ರ ಸರ್ಕಾರಿ ನೌಕರರು / ಮಾಜಿ ಸೈನಿಕರು / ಅಂಗವಿಕಲರು ಮತ್ತು ಇತರೆ ಅಭ್ಯರ್ಥಿಗಳಿಗೆ ಕೆ.ಸಿ.ಎಸ್.(ಸಾಮಾನ್ಯ ನೇಮಕಾತಿ ನಿಯಮಗಳು) 1977ರ ಪ್ರಕಾರ ಸಡಿಲಿಕೆಯನ್ನು ಕೊಡಲಾಗುವುದು. ಈ ಸಂಬಂಧ ಸೂಕ್ತ ದಾಖಲೆ ಒದಗಿಸುವುದು.

10. ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಅವರುಗಳ ನೇಮಕಾತಿ ಪ್ರಾಧಿಕಾರಿಗಳ ಮುಖಾಂತರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

11. ನೇಮಕಾತಿಯು ತಾತ್ಕಾಲಿಕವಾಗಿದ್ದು, ಆಯ್ಕೆಯಾಗಿ ನೇಮಕಗೊಂಡ ಅಭ್ಯರ್ಥಿಗಳು 2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಬೇಕಾಗುತ್ತದೆ.

12. ಆಯ್ಕೆಯಾದ ಅಭ್ಯರ್ಥಿಗಳನ್ನು ಈ ಸಂಸ್ಥೆಯ ಯಾವುದೇ ಶಾಖಾ ಕಚೇರಿಗಳಿಗೆ ಮತ್ತು ಕಂಡಿಕೆ–1ರಲ್ಲಿ ತೋರಿಸಲಾದ ಗ್ರೂಪ್–ಡಿ ಸಮೂಹದ ಯಾವುದೇ ಹುದ್ದೆಯ ಕರ್ತವ್ಯಕ್ಕೆ ನೇಮಕ ಮಾಡಬಹುದಾಗಿದೆ.

13. ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಅಥವಾ ಇನ್ನಾವುದೇ ನಿಯಮಗಳ ಪ್ರಕಾರ ಅಭ್ಯರ್ಥಿಯು ಅನರ್ಹರಾಗಿದ್ದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ.

14. **ಶುಲ್ಕ ಪಾವತಿ:**

1) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1ರ ಅಭ್ಯರ್ಥಿಗಳು ಯಾವುದೇ ರೀತಿಯ ಶುಲ್ಕ ಸಂದಾಯ ಮಾಡುವ ಅವಶ್ಯಕತೆಯಿಲ್ಲ.

2) ಉಳಿದೆಲ್ಲ ಅಭ್ಯರ್ಥಿಗಳು ಕಡ್ಡಾಯವಾಗಿ ರೂ.5/– (ರೂ. ಐದು ಮಾತ್ರ) ಇಂಡಿಯನ್ ಪೋಸ್ಟಲ್ ಆರ್ಡರ್ (ಐ.ಪಿ.ಒ.) ಅನ್ನು ಲಗತ್ತಿಸತಕ್ಕದ್ದು. (ಐ.ಪಿ.ಒ.ಅನ್ನು ಈ ಅಧಿಸೂಚನೆ ಹೊರಡಿಸಿದ ದಿನಾಂಕದ ನಂತರ ಖರೀದಿಸಿರಬೇಕು)

3) ಸದರಿ ಐ.ಪಿ.ಒ.ಅನ್ನು ***"ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು"*** ಇವರ ಹೆಸರಿಗೆ ಬೆಂಗಳೂರಿನ ಅಂಚೆಕಛೇರಿಯಲ್ಲಿ ಸಂದಾಯವಾಗುವಂತೆ ಬರೆದು ಅರ್ಜಿಯೊಂದಿಗೆ ಲಗತ್ತಿಸುವುದು.

15. ಅಭ್ಯರ್ಥಿಗಳು ಅರ್ಜಿಯೊಂದಿಗೆ ಕೆಳಕಂಡ ದಾಖಲಾತಿಗಳ ಪ್ರತಿಗಳನ್ನು ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಯಾವುದೇ ಸೂಚನೆಯನ್ನು ಕೊಡದೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

1) ಹುಟ್ಟಿದ ದಿನಾಂಕದ ಬಗ್ಗೆ ಶಾಲಾ ವರ್ಗಾವಣೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ಪ್ರತಿ.

2) ವಿದ್ಯಾರ್ಹತೆ ಬಗ್ಗೆ ಸ್ವಯಂ ದೃಢೀಕೃತ ಅಂಕಪಟ್ಟಿ ಪ್ರತಿ.

3) ಗ್ರಾಮೀಣ ಮೀಸಲಾತಿ ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 7ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಸರ್ಕಾರವು ನಿಗದಿಪಡಿಸಿದ ಪ್ರಮಾಣ ಪತ್ರಕ್ಕೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರು ಮತ್ತು ವಲಯ ಶಿಕ್ಷಣಾಧಿಕಾರಿಗಳು ಮೇಲು ರುಜು ಮಾಡಿದ ಪ್ರತಿ ಸಲ್ಲಿಸತಕ್ಕದ್ದು.

4) ಕನ್ನಡ ಮಾಧ್ಯಮ ಮತ್ತು ನಿರಾಶ್ರಿತರಿಗೆ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರವು ನಿಗದಿಪಡಿಸಿದ ನಮೂನೆಯಲ್ಲಿ ಸೂಕ್ತ ಪ್ರಾಧಿಕಾರಿಗಳಿಂದ ಪಡೆದುಕೊಂಡ ಪ್ರಮಾಣ ಪತ್ರಗಳ ಪ್ರತಿ ಲಗತ್ತಿಸುವುದು.

5) ಈಗಾಗಲೇ ಸೇವೆಯಲ್ಲಿದ್ದವರು ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಈ ಅಧಿಸೂಚನೆಯಲ್ಲಿರುವ ಹುದ್ದೆಗೆ ಅರ್ಜಿ ಸಲ್ಲಿಸಲು ನೀಡಲಾದ ನಿರಾಕ್ಷೇಪಣಾ ಪತ್ರ ಹಾಗೂ ಸೇವಾ ಪ್ರಮಾಣ ಪತ್ರದ ಪ್ರತಿ.

6) ಅಭ್ಯರ್ಥಿಗಳು ವಿದ್ಯಾಭ್ಯಾಸ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದ ಶಾಲಾ ನಡತೆಯ ಪ್ರಮಾಣ ಪತ್ರದ ಪ್ರತಿ.

7) ಅಭ್ಯರ್ಥಿಗಳು ವಾಸವಾಗಿರುವ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಇತ್ತೀಚೆಗೆ ಪಡೆದುಕೊಂಡ ನಡತೆಯ ಪ್ರಮಾಣ ಪತ್ರದ ಪ್ರತಿ.

8) ಮೀಸಲಾತಿ ಕೋರಬಯಸುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–I, ಪ್ರವರ್ಗ– II (ಎ), II (ಬಿ), III (ಎ) ಮತ್ತು III (ಬಿ) ಅಭ್ಯರ್ಥಿಗಳು ಸೂಕ್ತ ಪ್ರಾಧಿಕಾರಿಗಳು ನಿಗದಿಪಡಿಸಿದ ನಮೂನೆಗಳಲ್ಲಿ ನೀಡಿದ ಜಾತಿ ಮತ್ತು ಆದಾಯದ (ಚಾಲ್ತಿಯಲ್ಲಿರುವ) ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು.

9) ಮಾಜಿ ಸೈನಿಕ ಹಾಗೂ ಅಂಗವಿಕಲ ಅಭ್ಯರ್ಥಿಗಳು ಸೂಕ್ತ ಪ್ರಾಧಿಕಾರಿಗಳು ನೀಡುವ ಪ್ರಮಾಣ ಪತ್ರದ ಪ್ರತಿ ಸಲ್ಲಿಸತಕ್ಕದ್ದು.

10) ಈ ಅಧಿಸೂಚನೆಯ ಪ್ರಕಾರ ನೇಮಕಗೊಂಡವರು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ.(ಸ್ಪೆಷಲ್) 04 ಪಿಇಟಿ 2005, ದಿನಾಂಕ 31–3–2006 ರಲ್ಲಿ ತಿಳಿಸಿದಂತೆ ಕಾಂಟ್ರಿಬ್ಯೂಟರಿ ಪಿಂಚಣಿ ಸ್ಕೀಂಗೆ ವಂತಿಗೆ ನೀಡಬೇಕಾಗುತ್ತದೆ.

**ನಿಬಂಧಕರು**
ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಶುಕ್ರವಾರ, ಫೆಬ್ರವರಿ ೧೯, ೨೦೧೦ (ಮಾಘ ೩೦, ಶಕ ವರ್ಷ ೧೯೩೧) | ನಂ. ೧೮೨ |
|---|---|---|

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 28 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ: 08.02.2010**

**ವಿಷಯ:** ಸಹಕಾರ ಸಂಘಗಳ ಚುನಾವಣೆಯಲ್ಲಿ ನೇಮಕವಾಗಲು ಅಥವಾ ಚುನಾಯಿತರಾಗಲು ನಡೆಸಬೇಕಾದ ಕನಿಷ್ಠ ವ್ಯವಹಾರದ ಬಗ್ಗೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ಸಿ ಉಪಪ್ರಕರಣ 5 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಅಧಿಸೂಚನೆ ಸಂಖ್ಯೆ: ಸಿಒ 237 ಸಿಎಲ್‌ಎಂ 2006 ದಿನಾಂಕ: 16.12.2006 ಅನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ಸರ್ಕಾರವು ದಿನಾಂಕ: 31.03.2010 ರಂದು ಪದಾವಧಿ ಮುಕ್ತಾಯವಾಗುವ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ, ಬೆಂಗಳೂರು ಮತ್ತು ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ

ಸಂಘಗಳ ಆಡಳಿತ ಸಮಿತಿಗಳಿಗೆ ನಡೆಸಲಾಗುವ ಚುನಾವಣೆಗಳಿಗೆ ಸಂಬಂಧಪಟ್ಟಂತೆ ಮಾತ್ರ ಅನುಕ್ರಮವಾಗಿ ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳು ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ನಿರ್ವಹಿಸಬೇಕಾದ ಕನಿಷ್ಠ ವ್ಯವಹಾರದ ಪ್ರಮಾಣದಿಂದ ವಿನಾಯಿತಿ ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್.ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಶೇಷ ಪತ್ರಿಕೆ**

| | | |
|---|---|---|
| **ಭಾಗ – IV-A** | **ಬೆಂಗಳೂರು, ಶನಿವಾರ, ಫೆಬ್ರವರಿ ೨೦, ೨೦೧೦ (ಫಾಲ್ಗುಣ ೧, ಶಕ ವರ್ಷ ೧೯೩೧)** | **ನಂ. ೧೮೩** |

**CO – OPERATION SECRETARIAT**
**CORRIGENDUM**
**No. SAYI 19 CSR 2008, Bangalore, Dated : 18th February 2010**

In Notification No. SAYI 19 CSR 2008, dated, 09-11-2009 in its Schedule – II under the heading Karnataka Chitrakala Parishath Administrative Posts vide Sl. No. 1 is as follows :

| Sl. No. | Name of the Posts & Scale of Pay | No. of Posts | | Method of Recruitment | Minimum Qualification |
|---|---|---|---|---|---|
| | | Perma nent | Temp orary | | |
| 1 | 2 | 3 | 4 | 5 | 6 |
| 1. | Administrative Officer (18150-26952) or Consolidated Salary | 1 | | By Deputation from State Govt. Service OR Retired Govt. Officer on Contract Basis | - |

Instead of the above lines the following lines shall be read as follows :-

| Sl. No. | Name of the Posts & Scale of Pay | No. of Posts | | Method of Recruitment | Minimum Qualification |
|---|---|---|---|---|---|
| | | Perma nent | Temp orary | | |
| 1 | 2 | 3 | 4 | 5 | 6 |
| 1. | Chief Administrative Officer (20025-28275) | 1 | | By Deputation Of an Officer from the Dept. of Co-operation in the Cadre of Joint Registrar of Co-op. Societies. | - |

By Order and in the name of the Governor of Karnataka
**NANJUNDAPPA**
Under Secretary to Government
Co-operation Department

**ವಿಶೇಷ ಪತ್ರಿಕೆ**

| | | |
|---|---|---|
| **ಭಾಗ – IV-A** | **ಬೆಂಗಳೂರು, ಶನಿವಾರ, ಫೆಬ್ರವರಿ ೨೦, ೨೦೧೦ (ಫಾಲ್ಗುಣ ೧, ಶಕ ವರ್ಷ ೧೯೩೧)** | **ನಂ. ೧೮೪** |

**MINORITY WELFARE SECRETARIAT**
**NOTIFICATION**
**No. MWD 11 WLM 2009, Bangalore, Dated : 10th February 2010**

The Kazi's Act 1880 was meant for the territories administered by the Governor of Fort Saint George in Council. After the Independence of the Country and after re-organisation of the States the Governor of Fort Saint George in Council does not exist. Therefore the Kazi's Act 1880 has become irrelevant in Karnataka. Therefore the Notification No. RD 132 CWF 74, dated 05.03.1976 extending the Kazi's Act 1880 to the whole of State of Karnataka is hereby withdrawn.

By Order and in the name of the Governor of Karnataka
**R. NISAR AHMED**
Under Secretary to Government
Minority Welfare Department

| ಭಾಗ – IV-A | ಬೆಂಗಳೂರು, ಶನಿವಾರ, ಫೆಬ್ರವರಿ ೨೦, ೨೦೧೦ (ಫಾಲ್ಗುಣ ೧, ಶಕ ವರ್ಷ ೧೯೩೧) | ನಂ. ೧೮೫ |

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**
**ಅಧಿಸೂಚನೆ**

**ಸಂ. ಆನಾಸ : 05 : ಸಲಫ : 2010, ಬೆಂಗಳೂರು, ದಿನಾಂಕ : 19ನೇ ಫೆಬ್ರವರಿ, 2010**

ಗ್ರಾಹಕ ಸಂರಕ್ಷಣಾ ಅಧಿನಿಯಮ 1986 ರ ಕಲಂ 10 ರ ಉಪ ಕಲಂ (1ಎ) ರಡಿಯಲ್ಲಿನ ಆಯ್ಕೆ ಸಮಿತಿಯು ದಿನಾಂಕ:30.10.2009 ರಂದು ತೆಗೆದುಕೊಂಡ ತೀರ್ಮಾನದಂತೆ ಈ ಕೆಳಗಿನ ಕಾಲಂ–2 ರಲ್ಲಿರುವವರನ್ನು ಅವರ ಹೆಸರಿನ ಮುಂದೆ ಕಾಲಂ – 3 ರಲ್ಲಿ ಸೂಚಿಸಿರುವ ಜಿಲ್ಲಾ ಗ್ರಾಹಕರ ಪರಿಹಾರ ವೇದಿಕೆಗಳ ಸದಸ್ಯರ ಸ್ಥಾನಕ್ಕೆ ನೇಮಕ ಮಾಡಿದೆ.

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ನೇಮಕ ಮಾಡಿದ ಹುದ್ದೆ / ಸ್ಥಳ |
|---|---|---|
| **1** | **2** | **3** |
| 01 | ಶ್ರೀ ಶ್ರೀಧರ್ ಜಿ. ಕುಲಕರ್ಣಿ<br>ಚಿದಂಬರ ನಗರ<br>ಬಸವನಬಾಗೇವಾಡಿ ರಸ್ತೆ<br>ಎನ್.ಹೆಚ್ – 13 ರಸ್ತೆ,<br>ಬೈಪಾಸ್, ರಿಂಗ್ ರೋಡ್ ಹತ್ತಿರ<br>ಬಿಜಾಪುರ – 586 109 | ಸದಸ್ಯರು,<br>ಜಿಲ್ಲಾ ಗ್ರಾಹಕರ ವ್ಯಾಜಗಳ ಪರಿಹಾರ ವೇದಿಕೆ, ಬಿಜಾಪುರ, (ಗ್ರಾಹಕ ಸಂರಕ್ಷಣಾ ಕಾಯಿದೆ 1986ರ ಕಲಂ 10(2) ರ ಅನ್ವಯ 2ನೇ ಕಾಲಿಕ ಅವಧಿಗೆ) |
| 02 | ಶ್ರೀ ಶಂಕರೆಪ್ಪ ಲೋಕಪ್ಪ ಮಟ್ಟಿ<br>ನ್ಯಾಯವಾದಿಗಳು<br>ಸೈದಾಪುರ, ಹೊಸಣಗಿ<br>ಧಾರವಾಡ | ಸದಸ್ಯರು<br>ಜಿಲ್ಲಾ ಗ್ರಾಹಕರ ವ್ಯಾಜಗಳ ಪರಿಹಾರ ವೇದಿಕೆ<br>ಧಾರವಾಡ, ಇಲ್ಲಿ ದಿನಾಂಕ : 14.4.2010 ರಿಂದ ಖಾಲಿಯಾಗುವ ಹುದ್ದೆಗೆ. |
| 03 | ಶ್ರೀ ಹೆಚ್.ವಿ. ಮಹದೇವ<br>ನ್ಯಾಯವಾದಿಗಳು<br>ವೆಂಕಟಪ್ಪ ಕಟ್ಟಡ, ಮಹದೇಶ್ವರ ನಿಲಯ<br>ನಂ. 4159, ಹೊಸ ಲೈನ್, ಸಂತೇಪೇಟೆ, ಹಾಸನ – 573201 | ಸದಸ್ಯರು<br>ಜಿಲ್ಲಾ ಗ್ರಾಹಕರ ವ್ಯಾಜಗಳ ಪರಿಹಾರ ವೇದಿಕೆ,<br>ಹಾಸನ ಇಲ್ಲಿ ದಿನಾಂಕ : 27.04.2010 ರಿಂದ ಖಾಲಿಯಾಗುವ ಹುದ್ದೆಗೆ. |
| 04 | ಶ್ರೀಮತಿ ಜೆ. ನಿವೇದಿತ<br>C/o ಡಾ: ಮಮತ, ನಂ. 40, 3ನೇ ಅಡ್ಡ ರಸ್ತೆ, ವಿನಾಯಕ ನಗರ, ಹೆಬ್ಬಾಳ, ಬೆಂಗಳೂರು – 560 024. | ಸದಸ್ಯರು (ಮಹಿಳೆ)<br>ಜಿಲ್ಲಾ ಗ್ರಾಹಕರ ವ್ಯಾಜಗಳ ಪರಿಹಾರ ವೇದಿಕೆ, ಬೆಂಗಳೂರು ಗ್ರಾಮಾಂತರ ಹಾಗೂ ಬೆಂಗಳೂರು ನಗರ 1ನೇ ಅಪರ, ಸ್ವಾತಿ ಕಾಂಪ್ಲೆಕ್ಸ್ ಶೇಷಾದ್ರಿಪುರಂ, ಬೆಂಗಳೂರು ಇಲ್ಲಿ ದಿನಾಂಕ : 09.03.2010 ರಿಂದ ಖಾಲಿಯಾಗುವ ಹುದ್ದೆಗೆ. |
| 05 | ಶ್ರೀಮತಿ ಲಾವಣ್ಯ ಎಂ. ರೈ<br>4ನೇ ಮಹಡಿ, ಗುಲ್‌ಮೊಹರ್ ಪಾರ್ಕ್, ಕದ್ರಿದೇವಸ್ಥಾನದ ಹತ್ತಿರ, ಕದ್ರಿ, ಮಂಗಳೂರು. | ಸದಸ್ಯರು (ಮಹಿಳೆ)<br>ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ<br>ದಕ್ಷಿಣ ಕನ್ನಡ, ಇಲ್ಲಿ ದಿನಾಂಕ : 23.03.2010 ರಿಂದ ಖಾಲಿಯಾಗುವ ಹುದ್ದೆಗೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಪರಮೇಶ್ವರಪ್ಪ**
ಪೀಠಾಧಿಕಾರಿ, ಆಹಾರ – 3 ಶಾಖೆ
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

| ಭಾಗ – III | ಬೆಂಗಳೂರು, ಮಂಗಳವಾರ, ಫೆಬ್ರವರಿ ೧೬, ೨೦೧೦ (ಮಾಘ ೨೭, ಶಕ ವರ್ಷ ೧೯೩೧) | ನಂ. ೧೬೬ |
|---|---|---|

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ಅಧಿಸೂಚನೆ – 1

### ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ವಿಧಿ 3(1)ರ ಮೇರೆಗೆ ಅಧಿಸೂಚನೆ

### ಸಂಖ್ಯೆ: ಸಿಐ 62 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ, 2010

ಬೆಂಗಳೂರು ಮೆಟ್ರೋ ರೈಲು ಯೋಜನೆಗಾಗಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ವ್ಯಾಪ್ತಿಯಡಿ ಸ್ವಾಧೀನಪಡಿಸಿಕೊಳ್ಳಲು ಉದ್ದೇಶಿಸಿರುವ ಕೆಳಕಂಡ ಸ್ವತ್ತುಗಳ ಪ್ರದೇಶವನ್ನು ಕೈಗಾರಿಕಾ ಪ್ರದೇಶವೆಂದು ಘೋಷಿಸಲಾಗಿದೆ.

**ಗ್ರಾಮ : 1) ಪೀಣ್ಯ** **ಹೋಬಳಿ : ಯಶವಂತಪುರ** **ತಾಲ್ಲೂಕು : ಬೆಂಗಳೂರು ಉತ್ತರ** **ಜಿಲ್ಲೆ : ಬೆಂಗಳೂರು ನಗರ**

| ಕ್ರಮ ಸಂಖ್ಯೆ | ಸ್ವತ್ತಿನ ಕ್ರಮ ಸಂಖ್ಯೆ | ಗುರುತಿನ ಸಂಖ್ಯೆ (Identity No.) | ಚಕ್ಕುಬಂದಿ | | | | ಭೂಸ್ವಾಧೀನ ಪಡಿಸಿಕೊಳ್ಳಬೇಕಾದ ವಿಸ್ತೀರ್ಣ ಚ.ಮೀ. ಗಳಲ್ಲಿ |
|---|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 |
| 1 | KIADB Plot No. 1 | MSN 67 | ಬಿ.ಎಂ.ಆರ್.ಸಿ.ಎಲ್. ಸ್ವತ್ತು | NSN 68 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 0591.42 |
| 2 | KIADB Plot No. 1 | 68 | NSN 67 | NSN 69 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1196.50 |
| 3 | KIADB Plot No. 1 | 69 | NSN 68 | NSN 70 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1392.06 |
| 4 | KIADB Plot No. 1 | 70 | NSN 69 | NSN 71 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1222.66 |
| 5 | KIADB Plot No. 1 | 71 | NSN 70 | NSN 72 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1240.68 |
| 6 | KIADB Plot No. 1 | 72 | NSN 71 | NSN 73 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1135.68 |
| 7 | ಪೀಣ್ಯ ಸರ್ವೆ ನಂ. 10/5c 10/12 10/6 10/7 10/8 10/9 10/10 | 73 74 | NSN 73 | K.T. ಸಿಂಧೂವಾಡೆ | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 4214.347 |
| ಒಟ್ಟು | | | | | | | **10993.347** |

ಗ್ರಾಮ : 1) ದಾಸರಹಳ್ಳಿ ಹೋಬಳಿ : ಯಶವಂತಪುರ ತಾಲ್ಲೂಕು : ಬೆಂಗಳೂರು ಉತ್ತರ ಜಿಲ್ಲೆ : ಬೆಂಗಳೂರು ನಗರ

| ಕ್ರಮ ಸಂಖ್ಯೆ | ಸ್ವತ್ತಿನ ಕ್ರಮ ಸಂಖ್ಯೆ | ಗುರುತಿನ ಸಂಖ್ಯೆ (Identity No.) | ಚಕ್ಕುಬಂದಿ | | | | ಭೂಸ್ವಾಧೀನಪಡಿಸಿ ಕೊಳ್ಳಬೇಕಾದ ವಿಸ್ತೀರ್ಣ ಚ.ಮೀ. ಗಳಲ್ಲಿ |
|---|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 |
| 8 | ದಾಸರಹಳ್ಳಿ ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಸ್ತೆ | ಬಿ.ಬಿ.ಎಂ.ಪಿ. | ವಿ. ದಿನೇಶ್ ಕುಮಾರ್ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 392.51 |
| 9 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | TAPCMS | ಶೀನಯ್ಯ ಶೆಟ್ಟಿ | ನಾಗರಾಜು | | 139.35 |
| 10 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಸ್ತೆ | ನಾಗರಾಜು | ರಸ್ತೆ | TAPCMS | 185.80 |
| 11 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ವಿ. ದಿನೇಶ್ ಕುಮಾರ್ | ಶೀನಯ್ಯ ಶೆಟ್ಟಿ | ರಸ್ತೆ | BBMP | 371.60 |
| 12 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ನಾಗರಾಜು | ರತ್ನಬಾಯಿ ತಾರಾಚಂದ್ | ರಸ್ತೆ | ಗೋವಿಂದಪ್ಪ | 185.80 |
| 13 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಟಿ. ಶೀನಯ್ಯ ಶೆಟ್ಟಿ | ಸ.ನಂ. 58ರ ಪೈಕಿ | ರಸ್ತೆ | ಗೋವಿಂದಪ್ಪ | 185.80 |
| 14 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಟಿ. ಶೀನಯ್ಯ ಶೆಟ್ಟಿ | ಸ.ನಂ. 58ರ ಪೈಕಿ | ಟಿ. ಶೀನಯ್ಯ ಶೆಟ್ಟಿ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 825.00 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 15 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಪಿಳ್ಳಪ್ಪ | ಸ.ನಂ. 58ರ ಪೈಕಿ | ರತ್ನಬಾಯಿ ತಾರಾಚಂದ್ | ರಸ್ತೆ | 148.65 |
| 16 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಮಾನಂದ | ಗೋವಿಂದಪ್ಪ | ಸ.ನಂ. 58ರ ಪೈಕಿ | ರಸ್ತೆ | 89.76 |
| 17 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಜೋಸೆಫ್ | ಪಿಳ್ಳಪ್ಪ | ಸ.ನಂ. 58ರ ಪೈಕಿ | ರಸ್ತೆ | 96.08 |
| 18 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಹನುಮಯ್ಯ | ರಮಾನಂದ | ಸ.ನಂ. 58ರ ಪೈಕಿ | ರಸ್ತೆ | 185.89 |
| 19 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಸ್ತೆ | ಜೋಸೆಫ್ | ಸ.ನಂ. 58ರ ಪೈಕಿ | ರಸ್ತೆ | 185.89 |
| 20 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಎ. ನಿಸಾರ್ ಅಹ್ಮದ್ | ರಸ್ತೆ | ಸ.ನಂ. 58ರ ಪೈಕಿ | ರಸ್ತೆ | 184.00 |
| 21 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಗಂಗಪ್ಪ | ಪಟೇಲಪ್ಪ | ಉಳಿಕೆ | ರಸ್ತೆ | 100.00 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 22 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಶಂಕರ್ ಶೇಟ್ | ಎ. ನಿಸಾರ್ ಅಹ್ಮದ್ | ಉಳಿಕೆ | ರಸ್ತೆ | 80.00 |
| 23 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಮುನಿಯಪ್ಪ | ಗಂಗಪ್ಪ | ಉಳಿಕೆ | ರಸ್ತೆ | 60.00 |
| 24 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಸ್ತೆ | ಶಂಕರ್ ಶೇಟ್ | ಉಳಿಕೆ | ರಸ್ತೆ | 30.00 |
| **ಒಟ್ಟು** | | | | | | | **3446.13** |
| **ಗ್ರಾಮ : ಬಾಗಲಕುಂಟೆ** | | | **ಹೋಬಳಿ : ಯಶವಂತಪುರ** | | | **ತಾಲ್ಲೂಕು : ಬೆಂಗಳೂರು ಉತ್ತರ** | |
| 25 | ಸರ್ವೆ ನಂ. ೮; 77ರ ಪೈಕಿ | ಸರ್ವೆ ನಂ. 61 | ಉಳಿಕೆ | ಉಳಿಕೆ | ನಾಗಸಂದ್ರ ಗಡಿ | 1036.00 | 2440.00 |
| 26 | ಸರ್ವೆ ನಂ. 61 ರ ಪೈಕಿ | ಉಳಿಕೆ | ಸರ್ವೆ ನಂ. 77 | ಉಳಿಕೆ | ನಾಗಸಂದ್ರ ಗಡಿ | 9600.00 | 1550.00 |
| 27 | ಸರ್ವೆ ನಂ. 61 ರ ಪೈಕಿ | ರಸ್ತೆ | ಪೂರ್ಣ ಪ್ರಜ್ಞಾ ಸ್ಕೂಲ್ | ಮಹದೇವ | ರಸ್ತೆ | 133.12 | 133.12 |
| 28 | ಸರ್ವೆ ನಂ. 61 ರ ಪೈಕಿ | ರಸ್ತೆ | ಪೂರ್ಣ ಪ್ರಜ್ಞಾ ಸ್ಕೂಲ್ | ಉಳಿಕೆ | ಪಾಂಡುರಂಗ | 112.00 | 74.88 |
| 29 | ಸರ್ವೆ ನಂ. 61 ರ ಪೈಕಿ | ಕ್ರ. ಸಂ. 67 | ರಸ್ತೆ | ಸರ್ವೆ ನಂ. 61ರ ಪೈಕಿ | ರಸ್ತೆ | 300.00 | 240.00 |
| 30 | ಸರ್ವೆ ನಂ. 61 ರ ಪೈಕಿ | ರಸ್ತೆ | ಕ್ರ. ಸಂ. 5 | ಉಳಿಕೆ | ಕ್ರ. ಸಂ. 7 | 112.00 | 97.02 |
| 31 | ಸರ್ವೆ ನಂ. 61 ರ ಪೈಕಿ | ರಸ್ತೆ | ಕ್ರ. ಸಂ. 5 | ಕ್ರ. ಸಂ. 6 | ರಸ್ತೆ | 161.28 | 161.28 |
| 32 | ಸರ್ವೆ ನಂ. 61 ರ ಪೈಕಿ | ಕ್ರ. ಸಂ. 9 | ರಸ್ತೆ | ಸ.ನಂ. 61ರ ಪೈಕಿ | ರಸ್ತೆ | 350.00 | 317.50 |
| 33 | ಸರ್ವೆ ನಂ. 60 ರ ಪೈಕಿ | ಉಳಿಕೆ | ಕ್ರ. ಸಂ. 8 | ಉಳಿಕೆ | ರಸ್ತೆ | 9800.00 | 1456.00 |
| **ಒಟ್ಟು** | | | | | | | **6469.80** |

–: ಘೋಷ್ವಾರೆ :–

| ಕ್ರಮ ಸಂಖ್ಯೆ | ಗ್ರಾಮ | ಭೂಸ್ವಾಧೀನಪಡಿಸಿಕೊಳ್ಳಬೇಕಾದ ವಿಸ್ತೀರ್ಣ ಚ.ಮೀ., ಗಳಲ್ಲಿ |
|---|---|---|
| 1 | ಪೀಣ್ಯ | 10993.347 |
| 2 | ದಾಸರಹಳ್ಳಿ | 3446.13 |
| 3 | ಬಾಗಲಕುಂಟೆ | 6469.80 |
| | **ಒಟ್ಟು** | **20909.277** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ.)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅಧಿಸೂಚನೆ – 2**
**ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ವಿಧಿ 1(3)ರ ಮೇರೆಗೆ ಅಧಿಸೂಚನೆ**
**ಸಂಖ್ಯೆ: ಸಿಐ 62 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ, 2010**

ಬೆಂಗಳೂರು ಮೆಟ್ರೋ ರೈಲು ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲು ಉದ್ದೇಶಿಸಲಾಗಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯೊಳಗೆ ಬರುವ ಕೆಳಕಂಡ ಸ್ವತ್ತುಗಳಿರುವ ಪ್ರದೇಶಕ್ಕೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ರ 7ನೇ ಅಧ್ಯಾಯವು ಈ ಅಧಿಸೂಚನೆಯ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರುತ್ತದೆಂದು ಘೋಷಿಸಿದೆ.

**ಗ್ರಾಮ : 1) ಪೀಣ್ಯ** **ಹೋಬಳಿ : ಯಶವಂತಪುರ** **ತಾಲ್ಲೂಕು : ಬೆಂಗಳೂರು ಉತ್ತರ** **ಜಿಲ್ಲೆ : ಬೆಂಗಳೂರು ನಗರ**

| ಕ್ರಮ ಸಂಖ್ಯೆ | ಸ್ವತ್ತಿನ ಕ್ರಮ ಸಂಖ್ಯೆ | ಗುರುತಿನ ಸಂಖ್ಯೆ (Identity No.) | ಚಕ್ಕುಬಂದಿ | | | | ಭೂಸ್ವಾಧೀನ ಪಡಿಸಿಕೊಳ್ಳಬೇಕಾದ ವಿಸ್ತೀರ್ಣ ಚ.ಮೀ. ಗಳಲ್ಲಿ |
|---|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 |
| 1 | KIADB Plot No. 1 | MSN 67 | ಬಿ.ಎಂ.ಆರ್.ಸಿ.ಎಲ್. ಸ್ವತ್ತು | NSN 68 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 0591.42 |
| 2 | KIADB Plot No. 1 | 68 | NSN 67 | NSN 69 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1196.50 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 3 | KIADB Plot No. 1 | 69 | NSN 68 | NSN 70 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1392.06 |
| 4 | KIADB Plot No. 1 | 70 | NSN 69 | NSN 71 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1222.66 |
| 5 | KIADB Plot No. 1 | 71 | NSN 70 | NSN 72 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1240.68 |
| 6 | KIADB Plot No. 1 | 72 | NSN 71 | NSN 73 | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 1135.68 |
| 7 | ಪೀಣ್ಯ ಸರ್ವೆ ನಂ. 10/5c 10/12 10/6 10/7 10/8 10/9 10/10 | 73 74 | NSN 73 | K.T. ಸಿಂಧೂವಾಡೆ | ಉಳಿಕೆ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 4214.347 |
| ಒಟ್ಟು | | | | | | | **10993.347** |

**ಗ್ರಾಮ : 1) ದಾಸರಹಳ್ಳಿ** **ಹೋಬಳಿ : ಯಶವಂತಪುರ** **ತಾಲ್ಲೂಕು : ಬೆಂಗಳೂರು ಉತ್ತರ** **ಜಿಲ್ಲೆ : ಬೆಂಗಳೂರು ನಗರ**

| **ಕ್ರಮ ಸಂಖ್ಯೆ** | **ಸ್ವತ್ತಿನ ಕ್ರಮ ಸಂಖ್ಯೆ** | **ಗುರುತಿನ ಸಂಖ್ಯೆ (Identity No.)** | **ಚಕ್ಕುಬಂದಿ** | | | | **ಭೂಸ್ವಾಧೀನಪಡಿಸಿ ಕೊಳ್ಳಬೇಕಾದ ವಿಸ್ತೀರ್ಣ ಚ.ಮೀ. ಗಳಲ್ಲಿ** |
|---|---|---|---|---|---|---|---|
| | | | **ಪೂರ್ವ** | **ಪಶ್ಚಿಮ** | **ಉತ್ತರ** | **ದಕ್ಷಿಣ** | |
| **1** | **2** | **3** | **4** | **5** | **6** | **7** | **8** |
| 8 | ದಾಸರಹಳ್ಳಿ ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಸ್ತೆ | ಬಿ.ಬಿ.ಎಂ.ಪಿ. | ವಿ. ದಿನೇಶ್ ಕುಮಾರ್ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 392.51 |
| 9 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | TAPCMS | ಶೀನಯ್ಯ ಶೆಟ್ಟಿ | ನಾಗರಾಜು | | 139.35 |
| 10 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಸ್ತೆ | ನಾಗರಾಜು | ರಸ್ತೆ | TAPCMS | 185.80 |
| 11 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ವಿ. ದಿನೇಶ್ ಕುಮಾರ್ | ಶೀನಯ್ಯ ಶೆಟ್ಟಿ | ರಸ್ತೆ | BBMP | 371.60 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 12 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ನಾಗರಾಜು | ರತ್ನಬಾಯಿ ತಾರಾಚಂದ್ | ರಸ್ತೆ | ಗೋವಿಂದಪ್ಪ | 185.80 |
| 13 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಟಿ. ಶೀನಯ್ಯ ಶೆಟ್ಟಿ | ಸ.ನಂ. 58ರ ಪೈಕಿ | ರಸ್ತೆ | ಗೋವಿಂದಪ್ಪ | 185.80 |
| 14 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಟಿ. ಶೀನಯ್ಯ ಶೆಟ್ಟಿ | ಸ.ನಂ. 58ರ ಪೈಕಿ | ಟಿ. ಶೀನಯ್ಯ ಶೆಟ್ಟಿ | ಬಿ.ಎಂ.ಆರ್.ಸಿ.ಎಲ್. ಸ್ವತ್ತು | 825.00 |
| 15 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಪಿಳ್ಳಪ್ಪ | ಸ.ನಂ. 58ರ ಪೈಕಿ | ರತ್ನಬಾಯಿ ತಾರಾಚಂದ್ | ರಸ್ತೆ | 148.65 |
| 16 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಮಾನಂದ | ಗೋವಿಂದಪ್ಪ | ಸ.ನಂ. 58ರ ಪೈಕಿ | ರಸ್ತೆ | 89.76 |
| 17 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಜೋಸೆಫ್ | ಪಿಳ್ಳಪ್ಪ | ಸ.ನಂ. 58ರ ಪೈಕಿ | ರಸ್ತೆ | 96.08 |
| 18 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಹನುಮಯ್ಯ | ರಮಾನಂದ | ಸ.ನಂ. 58ರ ಪೈಕಿ | ರಸ್ತೆ | 185.89 |
| 19 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ರಸ್ತೆ | ಜೋಸೆಫ್ | ಸ.ನಂ. 58ರ ಪೈಕಿ | ರಸ್ತೆ | 185.89 |
| 20 | ಸ.ನಂ. 58ರ ಪೈಕಿ | ದಾಸರಹಳ್ಳಿ ಸ.ನಂ. 58ರ ಪೈಕಿ NSN 179 ಪೈಕಿ 179A ಪೈಕಿ 180 ಪೈಕಿ | ಎ. ನಿಸಾರ್ ಅಹ್ಮದ್ | ರಸ್ತೆ | ಸ.ನಂ. 58ರ ಪೈಕಿ | ರಸ್ತೆ | 184.00 |

